# ಮುನ್ನುಡಿ.

ಕರ್ನಾಟಕದಲ್ಲಿ ಎಲ್ಲ ಜಾತಿಯ ಹಿಂದೂ ಸಮಾಜದಲ್ಲಿ ಶ್ರೀ ವೇಂಕಟೇಶನ ಭಕ್ತರು ಅನೇಕ ಜನರಿರುತ್ತಾರೆ. ಅಂಥವರಿಗೆ ತಮ್ಮ ಇಷ್ಟದೇವತೆಯ ಪ್ರಾರ್ಥನೆಯನ್ನು ಕನ್ನಡದಲ್ಲಿ ಹಾಡಿ-ಹರಿಸಲಿಕ್ಕೆ ಸುಲಭವಾದ ಪದ್ಯಗಳು ಅವಶ್ಯವಾಗಿ ಬೇಕಾಗಿದ್ದವು. ಇದನ್ನರಿತು ನಮ್ಮ ಸ್ನೇಹಿತರೂ ಹುಟ್ಟುಗನ್ನಡಿಗರೂ ಉಭಯ ಭಾಷಾ ಕೀರ್ತನ ವಿಶಾರದರೂ ಆದ ಶ್ರೀಮಾನ್ ರಾಮ **ನಾಮೇ ಚಿಂತಾಮಣರಾಯರು** ಮಹಾರಾಷ್ಟ್ರ ಭಾಷೆಯಲ್ಲಿ ಸರ್ವತೋಮುಖವಾಗಿ ಪ್ರಚಾರವಾಗಿದ್ದ ವೇಂಕಟೇಶ ಸ್ತೋತ್ರಕ್ಕನುಸಾರವಾಗಿ ಕನ್ನಡದಲ್ಲಿ ಸರಸವೃತ್ತವಾಗಿದ್ದ ಭಾಮಿನೀ ಷಟ್ಪದಿಯಲ್ಲಿ ಬರೆದಿರುವರು. ಅದನ್ನು ಅಚ್ಚು ಹಾಕಿಸಿ ಇದೀಗ ತಮ್ಮೆಲ್ಲರ ಮುಂದಿಟ್ಟಿರುತ್ತದೆ. ಪರಮಾತ್ಮನ ಭಕ್ತರಾದ ತಾವೆಲ್ಲರೂ ಈ ಪದ್ಯಗಳನ್ನು ನಿಯಮದಿಂದ ಹಾಡಿ-ಹರಿಸಿ ಶ್ರೀ ಕೃಪೆಗೆ ಪಾತ್ರರಾಗಿ ಇವುಗಳಲ್ಲಿ ಕಾಣಿಸಿದ ತಕ್ಕ ಫಲಗಳನ್ನು ಪಡಕೊಂಡು ಸುಖವಾಗಿ ಬಾಳಬೇಕೆಂದು ಹಾರೈಸುತ್ತೇವೆ. ಕಲಿಯುಗದಲ್ಲಿ ಈಶಭಕ್ತಿ ನಾಮಸ್ಮರಣೆ ಇವೇ ಪ್ರಾಧಾನ್ಯವಾಗಿರುವದರಿಂದ. ಈ ಚಿಕ್ಕ ಪ್ರಯತ್ನವು ಸಾರ್ಥಕ್ಯ ಹೊಂದುವದೆಂದು ನಂಬಿದ್ದೇವೆ.

ಅಷಾಢ ಶು. ೧೧ ಶಕೆ ೧೮೭೨ ೨೫—೭—೫೦

**ಪ್ರಕಾಶಕ.**

|| ಶ್ರೀರಾಮಸಮರ್ಥಂ ||

# ಹೃದ್ಗತವು

ಶ್ರೀವತ್ಸಂ ಮಣಿಕೌಸ್ತುಭಂಚ ಮುಕುಟಂ ಕೇಯೂರ
ಮುದ್ರಾಂಕಿತಂ || ಬಿಭ್ರಾಣಂ ವರದಂ ಚತುರ್ಭುಜ
ಧರಂ ಪೀತಾಂಬರೋದ್ಭಾಸಿತಂ || ಮೇಘಶ್ಯಾಮತನುಂ
ಪ್ರಸನ್ನವದನಂ ಫುಲ್ಲಾರವಿಂದೇಕ್ಷಣಂ || ಧ್ಯಾಯೇದ್
ವೇಂಕಟನಾಯಕಂ ಹೃದಿರಮಾದೀಶಂ ಸುರೈರ್ವಂದಿತಂ||

ಕನ್ನಡ ನಾಡಿನಲ್ಲಿ ಶ್ರೀ ವೇಂಕಟೇಶನ ಭಜಕರು ಸಮಸ್ತ ಜಾತಿಗಳಲ್ಲಿ ಬಹಳವಾಗಿ ಇರುತ್ತಾರೆ. ಅವರೆಲ್ಲರಿಗು ನಿತ್ಯದಲ್ಲಿ ಅಥವಾ ಪ್ರತಿ ಶುಕ್ರವಾರಕ್ಕೊಮ್ಮೆ ಪಠಣ ಮಾಡುವ ಗೋಸ್ಕರ ಸಹಜಸುಲಭವಾದ ಭಾಮಿನೀಷಟ್ ಪದಿವೃತ್ತದಲ್ಲಿ ವೇಂಕಟೇಶ ಸ್ತೋತ್ರವನ್ನು ರಚಿಸಲಾಗಿದೆ. ಕಳೆದ ತಾರಣ ಸಂವತ್ಸರದ ಅಕ್ಷಯ್ಯ ತೃತೀಯಾ ಭೌಮವಾರ ದಿವಸ ಈ ಕೆಲಸವು ಪೂರ್ಣಗೊಂಡಿದೆ. ಗಡಿನಾಡಿನಲ್ಲಿ ಎಷ್ಟೋ ಜನರು ಕನ್ನಡ ಲಿಪಿಯಲ್ಲಿ ಮುದ್ರಿಸಿದ ಮರಾಠೀ ವೇಂಕಟೇಶ ಸ್ತೋತ್ರವನ್ನು ಓದುತ್ತಿರುವದನ್ನು ಕಣ್ಣಾರೆ ಕಂಡು ಕನ್ನಡದಲ್ಲಿಯೂ ಹಾಡಿ ಹರಿಸಲಿಕ್ಕೆ ಯೋಗ್ಯವಾದ ಸ್ತೋತ್ರವನ್ನು ಮಾಡಿಕೊಡಲು ಪಾಚೇ ಶಾಂತಪ್ಪಾ ಶೇಣಯಿ ಎಂಬ ವಯೋವೃದ್ಧರಾದ ಜ್ಯೋತಿರ್ವಿದ ಮಹನೀಯರು ಅಪ್ಪಣೆ ಮಾಡಿದ ಮೇರೆಗೆ ಪ್ರಯತ್ನಕ್ಕೆ ಪ್ರಾರಂಭ ಮಾಡಲ್ಪಟ್ಟಿತು. ನಮ್ಮ ಬಾಲ ಸ್ನೇಹಿತರೂ ದೊಡ್ಡ ಸಾಹಿತ್ಯಕರೂ ಆದ ಶ್ರೀಮಾನ ಬೋಶೇ ಅನಂತರಾಯರು ವ್ಯಾಕರಣ

ದೃಷ್ಟಿಯಿಂದ ಇದರಲ್ಲಿ ಅನೇಕ ತಿದ್ದುಪಡಿಗಳನ್ನು ಸೂಚಿಸಿದ್ದಕ್ಕೆ ಅವರಿಗೆ ನಾನು ತುಂಬಾ ಋಣಿಯಾಗಿದ್ದೇನೆ. ಇನ್ನೂ ಕೆಲವು ದೋಷಗಳು ಉಳಿದಿರಬಹುದು ಅವುಗಳನ್ನು ಸಹೃದಯರಾದ ಬಾಂಧವರು ಜ್ಞಾಪಕಕ್ಕೆ ತಂದು ಕೊಟ್ಟಲ್ಲಿ ಮುಂದಿನ ಆವೃತ್ತಿಯಲ್ಲಿ ಸುಧಾರಿಸುವೆವು. ಅಚ್ಚು ಹಾಕಿಸಲಿಕ್ಕೆ ಸಿದ್ಧವಾದ ಬಳಿಕ ನಮ್ಮ ಅಸಹಾಯ ಪರಿಸ್ಥಿತಿಯ ಮೂಲಕ ನಾವು ಮುಂಗಾಣದೆ ಕುಳಿತಿದ್ದವು. ನಮ್ಮ ಹಿತೈಷಿಗಳಾದ ಶ್ರೀಮಾನ್. ಚಿದಂಬರರಾವ ಕುಲಕರ್ಣಿ ಹೀರೇಬಾಗೇವಾಡೀಕರ ಇವರು ಮುಂಬಂದು ಪ್ರಕಟಣೆಯ ಹೊಣೆಯನ್ನು ತಾವು ನೋಡಿಕೊಂಬುವದಾಗಿ ಆಶ್ವಾಸನೆಯನ್ನಿತ್ತರು. ಬೆಳಗಾಂವಿಯಲ್ಲಿಯ. ವೀರಭಾರತ ಪ್ರೆಸ್ಸಿನ ಒಡೆಯರಾದ ಶ್ರೀಮಾನ ಎ. ಪಿ. ಚೌಗಲೆಯವರು ಕಾಲಕಾಲಕ್ಕೆ ಪ್ರೂಫುಗಳನ್ನು ನಮ್ಮಲ್ಲಿಗೆ ಕಳಿಸಿ ಕೊಟ್ಟು ಸಹಕಾರ್ಯದಿಂದ ಈ ಚಿಕ್ಕ ಪುಸ್ತಕದ ಕೆಲಸವನ್ನು ಅಂದವಾಗಿ ಮತ್ತೆ ತೀವ್ರವಾಗಿ ಮಾಡಿಕೊಟ್ಟದ್ದಕ್ಕೆ ಅವರ ಉಪಕಾರವನ್ನು ಸ್ಮರಿಸುತ್ತೇನೆ. ನಮ್ಮ ಕನ್ನಡ ಬಾಂಧವರು ದೊಡ್ಡ ಮನಸ್ಸಿನವರೂ ಮತ್ತು ಗುಣಗ್ರಾಹಿಗಳೂ ಆಗಿರುವದರಿಂದ ೨ ನೇ ಆವೃತ್ತಿ ತೆಗೆಯುವ ಯೋಗವನ್ನು ತೀವ್ರ ತಂದುಕೊಡುವರೆಂದು ನಂಬಿಗೆಯಿದೆ. ಪರಮಾತ್ಮನು ನಮ್ಮೆಲ್ಲರ ಕಲ್ಯಾಣ ಮಾಡಲಿ.

**ಶಹಾಪೂರ**(ಬೆಳಗಾವಿ.)

೮೨೨ ಆಚಾರ್ಯ
ಓಣಿ ಆ. ಶು. ೧೧ } **ಚಿಂತಾಮಣಿ ಅಪ್ಪಾರಾವ ರಾಮನಾಮೆ.**
ಶಕೆ ೧೮೬೨

# || ಶ್ರೀ ವೇಂಕಟೇಶ ಸ್ತೋತ್ರಂ ||

ಭಾಮಿನೀ—ಷಟ್ಪದಿ.

ಓಂ ನಮೋ ಹೇ ರಂಬ ಗಣಪತಿ
ನೀನೆ ಸಕಲಾರಂಭ ಪೂಜ್ಯನು
ಜ್ಞಾನದಾಯಕ ವರದ ಮಂಗಲ ಮೂರ್ತಿ ಯಾಗಿರುವೆ
ಮಾನವನ ಜೀವನದ ಸಫಲತೆ
ಶ್ರೀನಿವಾಸನ ಕೃಪೆಯ ಲಾಭದಿ
ತಾನೆ ನಿರ್ವಿಘ್ನತೆಯೊಳಾಗಲಿ ಬೇಡಿಕೊಂಬುವೆನೈ ||೧||

ನಮನ ಮಾಳ್ಪೆನು ಹಂಸವಾಹಿನಿ
ವಿಮಲ ವಾಗ್ವರದೇ ವಿಲಾಸಿನಿ
ಕಮಲ ಜಾನನ ರಾಣಿ ಗ್ರಂಥ ನಿರೂಪಣಾದಿ ಸ್ಫೂರ್ತಿ
ರಮೆಯರಸ ಸಂಪ್ರೀತನಾಗುತೆ
ಸಮಯಕೊದಗುತೆ ಪೊರೆದು ತಣಿಸಲಿ
ಮಮತ ಹರಿಭಕ್ತಿಯೊಳು ಬೆಳೆಯಲಿ ಸ್ತೋತ್ರಪಾಠದೊಳೇ ||೨||

ಇನ್ನು ಶ್ರೀಗುರುವರ್ಯರಂಘ್ರಿಗೆ
ಎನ್ನ ಮನಸ ಪ್ರವಿಷ್ಟವಾಗಲಿ
ಸನ್ನುತಾಚಾರ್ಯರ ಕೃಪಾಶೀರ್ವಾದ ಬಯಸುವೆನೈ
ಚೆನ್ನ ಕೇಶವ ಸ್ತೋತ್ರ ಮಾಡಲು
ಮುನ್ನ ಸ್ಫೂರ್ತಿಯ ಝರಿಯು ಹರಿಯಲಿ
ಅನ್ನುವವರಿಗು ಕೇಳುವವರಿಗೆ ನಿತ್ಯ ಕಲ್ಯಾಣಂ ||೩||

ಸಂತ ಸಜ್ಜನ ಯೋಗಿ ಸಾಧಕ
ಗ್ರಂಥ ಭಾಂಡಾರದ ಧನಿಕ ಶ್ರೀ
ಮಂತ ಹರಿಭಕ್ತರ ಸಮೂಹಕೆ ವಂದನವ ಮಾಳ್ಪಿಂ
ಗ್ರಂಥವಿದು ಹೃತ್ಕಮಲದಲಿ ಭಗ
ವಂತ ಮೂರ್ತಿಯ ಧ್ಯಾನ ನೆಲಿಸುತೆ
ಚಿಂತೆಭಯ ಸಂಮೋಹ ನಾಶಕವಾಗಿಹುದು ಕೇಳಿ ||೪||

ಅಂಟಿಕೊಂಡಿಹ ಪ್ರಾಕ್ತನದ ಭವ
ಕಂಟಕದ ಪರಿಹಾರವಾಗಲು
ತುಂಟ ಷಡ್ವೈರಿಗಳ ಬಂಡನೆ ಮುರಿದು ಶಾಂತಿಯನೆ
ಉಂಟು ಮಾಡಲು ಮನಸಿನಿಂದಲಿ
ಬಂಟರಿದನಂ ಪಠಿಸಿದರೆ ವೈ-
ಕುಂಠನಾಯಕ ತುಷ್ಟನಾಗುತೆ ಬಯಿಸಿದುದೆ ಕೊಡುವಂ||೫||

ಜಯ ಜಯಾ ವೇಂಕಟರಮಣ ಭವ
ಭಯ ನಿವಾರಣ ಕ್ಷೀರಸಾಗರ
ಶಯನ ಪರಿಪೂರ್ಣನೆ ಪರಂಜ್ಯೋತಿಯೆ ದಯಾನಿಧಿಯೇ
ಸುಯಶ ಚರಿತ ಪ್ರಕಾಶ ಗಹನನೆ
ದಯದಿ ಚಿತ್ತೈಸುವದು ಪ್ರಾರ್ಥನೆ
ಹಯವದನ ನಿನ್ನೊಲುಮೆಯನೆ ಪಡೆಯಲ್ಕೆ ಪಾಡುವೆನೈ ||೬||

ಜನನಿಯಂತೆಯೆ ಲಾಲಿಸಿದೆ ಸಲೆ
ಜನಕನಂದದಿ ಪಾಲಿಸಿದೆ ಮುನಿ
ವಿನುತನೇ ರಕ್ಷಿಸಿದೆಯೆನ್ನನು ಸಕಲ ಸಂಕಟದಿ
ಎನಿತು ಸಟಿಯಿ ಜಗವ ಸೃಜಿಸಲು
ನಿನಗೆ ಜನನೀ ಜನಕ ತನವದು
ಘನತೆಯಿಂದಲ್ಲಂಟೆ ಕೊಂಡಿಹುದಿನ್ನು ಹತ್ತುಗಡೆ ||೭||

ಬಿರುದುಗಳ ದೆಶೆಯಿಂದ ಭಕುತರ
ಪರಿಪರಿಯ ಸಂಕಟಗಳೊಳು ನೀಂ
ಭರದಿ ರಕ್ಷಿಸಿ ಪೊರೆವೆ ದೀನಾನಾಥ ಕರಿವರದಾ
ಗರುಡ ಗಮನನೆ ನಿನ್ನೊಳುರುತರ
ನಿರುತದಲಿ ಪ್ರೇಮವನೆ ಕೊಟ್ಟಿಹೆ
ಸರಸ ಭಜನವ ಮಾಡಲೋಸುಗ ಭಕ್ತಜನತತಿಗೆ ||೮||

ಈತರದೊಳಪೂರ್ವ ಗೋಷ್ಠಿಯ
ಮಾತು ವಿಜ್ಞಾಪಿಸುವೆ ನೀಗಳೆ
ಮಾತುಲನ ಘಾತುಕನೆ ರುಕ್ಮಿಣಿಯೊಡೆಯನಾಲೈಸೈ
ಏತಕೀ ವಿಧಿವಶದೊಳೆನ್ನನು
ಮಾತೃಗರ್ಭದಿ ಪುಟ್ಟಿಸುತ್ತಲಿ
ಭೂತಲದಿ ಗಲಿಬಿಲಿಯಲೋಲಿಕ ರಚನೆಯೊಳಗಿಟ್ಟೆ ||೯||

ಬಳಲಿದೆನು ಸಂತತದಿ ನಿನ್ನನು
ತಿಳಿಯದಲೆ ಸಂಸಾರ ಮೋಹದಿ
ಕಳವಳದಿ ಬಂದೀಗ ನಿನ್ನಯ ಕಾಲು ಪಿಡಿದಿಹೆನೈ
ನಳಿನ ನಾಭನೆ ಕ್ಷಮಿಸು ನನ್ನಯ
ತಿಳಿದು ಮೇಣ್ ತಿಳಿಯದಲೆ ಮಾಡಿಹ
ಹಳೆಯ ಹೊಸ ಪಾಪಾಚರಣೆಯಪರಾಧ ರಾಶಿಗಳಂ ||೧೦||

ಅಮಿತ ಬಲವಂತನೆ ಸಮರ್ಥನೆ
ನಮಿಪೆ ನಿನ್ನನು ಬಾರಿಬಾರಿಗ
ಕಮಲನಾಭನೆ ಸೈರಿಸೆಲ್ಲವನಿನ್ನು ಜಗಜಟ್ಟಿ
ಶಮದಮಾದಿಕ ವಿಧಿವಿಧಾನದ
ವಿಮಲಸಾಧನ ಮಾರ್ಗ ಪಿಡಿಯದೆ
ಭ್ರಮದಿ ಕೆಟ್ಟೆನು ದುರಿತರಾಶಿಗಳನ್ನೆ ಶೇಖರಿಸಿ ||೧೧||

ಅಗಣಿತ ವದನ್ನುಡಿಯಲಾಗದು
ಗಗನ ಭೇದಿಸಿ ಪೋಗಿಹುದು ಸಲೆ
ಅಘತಿತಯ ಪಂತಾಪದಿಂದಲಿ ಸಲಹು ಹೃಷಿಕೇಶಾ
ಅಗತಿಕನು ಮೊರೆಯಿಡುತ ಬೇಡುವೆ
ಖಗಗಮನ ನೀನಿನ್ನು ನಿನ್ನಯ
ಮಿಗೆ ದಯಾವಂತಿಕೆಯ ಬಿರುದನೆ ಸತ್ಯ ಮಾಡುವದೈ ||೧೨||

ತನಯನಪರಾಧಗಳು ಸಾವಿರ
ದನಿತು ನೀತಿ ಮೀರಿದ್ದರೂ ನಿಜ
ಜನನಿಗಾತನ ವಿಷಯದೊಳು ತಾತ್ಸಾರ ಪುಟ್ಟದೆಲಾ
ಎನಗೆ ನೀಂ ತಾಯ್ತಂದೆಯಾಗಿಹೆ
ಘನ ಕೃಪಾನಿಧಿ ಭಕ್ತ ವತ್ಸಲ
ನೆನಿತು ನನ್ನದುಪೇಕ್ಷೆ ನಿನ್ನಯ ಚಿತ್ತದೊಳಗಿಹುದೈ ||೧೩||

ಬದ್ಧನಾಂ ಮೊದಲಿನಲಿ ಪಾಮರ
ಬುದ್ಧಿಹೀನನು ವಿಷಯಲಂಪಟ
ಬಿದ್ದಿರುವೆ ಕೈಕಾಲು ಕಟ್ಟಿ ಪ್ರಪಂಚ ಜಾಲದಲಿ
ಉದ್ದಿನಲಿ ಬಿಳಿ ಕರಿಯ ಕಾಳು ಗ-
ಳಿದ್ದು ಕಾಣವು ಹುಡುಕಲಾಗದು
ಮದ್ದುಗುಣಿಕೆಯ ಕಾಯಿಗಳು ಸಿಹಿಯೆಂತು ರುಚಿಸುವವೈ|೧೪|

ನೆಗ್ಗಿನಾ ಮುಳ್ಳುಗಳ ಮೃದುಲತೆ
ಜೊಗ್ಗು ಬಡಿದರು ಬಿರುಸು ಪೋಗದು
ಮೊಗ್ಗಿಯೊಡೆಯದು ಗುಲ್ಮಲತೆ ಪಾಷಾಣಕದರಂತೆ
ಅಗ್ಗ ಸ್ವೇಚ್ಛಾಚಾರಕೆನ್ನಯ
ದಿಗ್ಗಜರು ಹೆದರುವರು ಭಯದಿಂ
ಮುಗ್ಗರಿಸುವರು ಪಾಪಭಾರದಿ ನೋಡು ಗೋವಿಂದಾ ||೧೫||

ಕಾಲಿನಿಂ ತಲೆತನಕವಾಗಿಯೆ
ಶೀಲಭ್ರಷ್ಟಾನ್ಯಾಯಿಯಾಗಿಹೆ
ಲೋಲುಪನು ವಾಸನೆಗಳೊಂದಿಗೆ ತುಚ್ಛತೆಯ ಹೊಂದಿ
ಹೇಳಲಾಗದ ಪರಿಯು ನನ್ನಯ
ಗೋಳುವೆಗ್ಗಳ ತ್ರಿವಿಧ ತಾಪವ
ತಾಳಲಾರದೆ ಮಿಡುಕಿ ನಿನ್ನಯ ಪದರಿನಲಿ ಬಿದ್ದೆಂ ||೧೬||

ಅದಕೆ ರಕ್ಷಣವಿನ್ನು ನಾನಾ
ವಿಧದುಪಾಯದಿ ಮಾಡುವದು ದೃಢ
ಸದಯ ಹೃದಯದಿ ಯೆನ್ನನಂಗೀಕರಿಸಿ ಸಲಹುವದೈ
ಉದಿತವಾಗಲು ಕರುಣೆ ಕಿರಣವು
ಸುದಿನ ಲಭಿಸಿತು ಪೂರ್ವ ಪುಣ್ಯದಿ
ಪದುಮನಾಭನೆ ನಿನ್ನನುತಿಸಲು ಮತಿಯು ಪುಟ್ಟಿಹುದೈ||೧೭||

ಏನನೊರೆಯಲಿ ನಾನಪಂಡಿತ
ಹೀನನಜ್ಞಾನಿಯು ಖಲನು ಗುಣ
ಗಾನ ಮಾಡಲ್ಕಿರದು ಸಾಧನ ಶಕ್ತಿಯೆನ್ನೊಳಗೆ
ನೀನೆ ಕೈಕೊಂಡರೆ ಸಮರ್ಥರ
ಶ್ವಾನದಂತೆಯೆ ಸರ್ವಜನ ಸನ್
ಮಾನಕೊಡುವರು ಹಳಿಯದಲೆ ಬೊಗಳಿಕೆಗೆಯದರಂತೆ||೧೮||

ಮಾನ ಮೇಣವಮಾನದೆಣಿಕೆಯು
ತಾನೆ ನಿನ್ನನು ಸೇರಿಹುದು ಗೀ—
ರ್ವಾಣ ಸಂಸ್ಕೃತ ವಾಣಿ ತಿಳಿಯದ ಮೂಢನಿರೆ ಸಹಿತಂ
ನೀನು ಪ್ರೀತಿಯು ಪಿಡಿದ ಮೇಲನು
ಮಾನವಿಲ್ಲದೆ ಜನರು ಮೆಚ್ಚುತೆ
ಸ್ವಾನುಭವ ಸಿದ್ಧಾಂತ ರುಚಿಯನೆ ಸವಿದು ತಣಿಯುವರೈ ||೧೯||

ಆದಿ ಮೂರುತಿ ನಡಿಸಿರಲು ಸಂ—
ಪಾದಿಸಿದ ಬಿರುದುಗಳ ಪಾಲನೆ
ಖೇದ ಜನಕವಿದಿನ್ನು ದೈನ್ಯವಡೆಮಗೆ ಕಾಡಿದರೆ
ಪಾದ ತಲದಲಿ ಲಕ್ಷ್ಮಿ ನಿನ್ನೊಳು
ಭೇದ ವಿಲ್ಲದೆ ನೆಲಿಸಿರಲು ನಾಂ
ಹಾದಿಗುಂಟ ಜನಕ್ಕೆ ಬಿಕ್ಕೆಯ ಬೇಡಿ ಕಾಡುವದೇಂ? ||೨೦||

ಆರಿಗಿದು ಸರಿದೋರುವದು ಭಾಂ—
ಡಾರಿಯಾಗಿ ಕುಬೇರ ನಿನ್ನಯ
ಪಾರುಗಾಣದ ಸಂಪದಗಳಧಿಕಾರ ಪಡೆದಿರಲು
ಮಾ–ರಮಣ ನಿನ್ನವನು ನಾನಿರೆ
ಭೂರಿ ದುರ್ಗ್ಗಾಣಿಯ ಪಡೆಯೆ ಮನೆ
ಮಾರು ತಿರಗುತ ದೂರು ಪೇಳುತ ಕೈಯನೊಡ್ಡಿದರೆ ||೨೧||

ಬಾರದದು ಭೂಷಣವು ನಿನಗೆ ಮು
ರಾರಿ ಪುರುಷಾರ್ಥವದು ಘನದ ವಿ
ಚಾರದಲಿ ಶ್ರೀಮಂತ ಧೊರಿ ನೀನೆನಗೆ ದೊರೆತಿರಲು
ಕೌರವರ ಸಭೆಯೊಳಗೆ ಬಲುಪ
ಸೀರೆಗಳನುಡಿಸಿರುವೆ ದ್ರೌಪದಿ
ನಾರಿಗಾಕಾಲದಲಿ ಕೃಪಣತೆಯೀಗಲಿನಗೇಕೈ ||೨೨||

ಇರುಳಿನಲಿ ದುರ್ವಾಸ ಮುನಿಗಳು
ದುರುಳ ಕೌರವರಿಂದ ಪ್ರೇರಿತ
ರಿರಲು ಪಾಂಡವ ಸತ್ವಹರಣಕೆ ಶಿಷ್ಯಜನ ಸಹಿತಂ
ಬರಲು ರಭಸದರಣ್ಯದೊಳು ಕನಿ
ಕರ ಪಡದೆ ಭೋಜನವ ಬೇಡಲು
ಮೊರೆಯಿಡಲು ಪಾಂಚಾಲಿ, ಧಾವಿಸಿ ಬಂದೆ ಗೋವಿಂದಾ||೨೩||

ಆಳುವ ತಂಗಿಯ ಕಂಬನಿಗ
ನ್ನಳಿಸಿ ಸಂತೈಸಿದೆ ಬಹಳ ಪರಿ
ಜಳಕ ಮಾಡಲ್ಕೆಂದು ಮುನಿ ಭಾರವನ ಕಳುಹಿಸುತೆ
ಹೊಳೆಯು ದಂಡೆಯು ಮೇಲಕನ್ನದ
ಮಳೆಯು ಸುರಿಸುತ ಮಾಯವಿಭ್ರಮೆ
ಬಳೆದು ತಣಿಸಿದೆ ಮುನಿಗಳಿಂದಲಿ ಹರಿಕೆಗಳ ಸಲಿಸಿ ||೨೪||

‘ ಅನ್ನ ’ ‘ ಅನ್ನಂ ’ದೆನುತ ಬಾಯ್ ಬಿಡು
ತಿನ್ನು ಮನೆ ಮನೆ ದಶೆದಿಶೆಗಳಲಿ
ಬನ್ನಬಡಿಸುತ ತಿರುಗಿಸುವೆ ಕ್ಷೀರಾಬ್ಧಿಜಾಮಾತಾ
ಅನ್ನಲಿನ್ನೇನಿನ್ನು ನೀನುಪ
ಮನ್ಯುವಿಗೆ ಕ್ಷೀರಾಬ್ಧಿ ಕೊಟ್ಟಿಹೆ
ಚೆನ್ನಕೇಶವ ಪರಮಪುರುಷ ಕೃಪಾಲು ಗುಣನಿಧಿಯೇ ||೨೫||

ಏಕೆ ದಯೆಯಿನಿತಿಲ್ಲವೆನ್ನೊಳು
ಲೋಕ ಪಾವನ ಮೂರ್ತಿ ನಿನ್ನಯ
ಸಾಕಿಸಲಹುವ ಬಿರುದು ಪಡಿಲಾಯ್ತೇನಧೋಕ್ಷಜನೆ
ಆ ಕಠಿಣ ಬಡಬಾಗ್ನಿಯಿಂದಲ
ನೇಕ ಸಲ ಕಳವಳಿಸಲಾಗಿಯು
ಶೋಕ ವಿಹ್ವಲನಾ ಸಮುದ್ರನು ದೂಡನದನೆಂದೂ ||೨೬||

ಅಂತರಂಗದಲಿರಿಸಿ ಕೊಂಡಿಹ
ನೆಂತು ಬಿಡುವನು ಬಹಳ ದುರ್ಗುಣ
ವಂತ ನಾದಾಗೆಂದಿಗೂ ತನ್ನಾಶ್ರಿತರ ಪರಲುಂ
ಕಂತು ಪಿತ ಕಡಿಯಲ್ಕೆ ಬಾರದು
ಕುಂತಿ ಸುತರೊಳಗನುಭವಿಸಿರಲು
ಚಿಂತೆಯೆನಗಿನ್ನೇಕೆ ಹೊಣೆಗಾರರ ಶಿರೋಮಣಿಯೇ ||೨೭||

ಮಧುರ ವಚನದಿ ಪ್ರಾರ್ಥಿಸುವೆ ನಿ-
ನ್ನಧರ ಪೀಯೂಷವನೆ ಸೇವಿಪ
ಬಿದುರಗೊಳಿವೆಯ ಬಿಡದೆ ಕೈಯೊಳಗಿರಿಸಿ ಗೋವುಗಳ
ಚದರುವಿಕೆಯನೆ ನಿಲ್ಲಿಸುತ ವ್ರಜ
ಸುದತಿ ಮಣಿಗಳ ಮರುಳಗೊಳಿಸಿದೆ
ಬದುಕಿಸಿದೆ ಜನ ಕಿರುಬೆರಳ ತುದಿಯಿಂದೆ ಗಿರಿಯೆತ್ತಿ ||೨೮||

ಎಂಥ ಗಡುತರ ಪೃಥ್ವಿಭಾರವ
ನೆಂತು ಬಿಡದಲೆ ಕೂರ್ಮವೇಷದಿ
ನಿಂತಿರುವೆ ನೀನಿನ್ನು ಬಿಡದಲೆ ಘನತೆಯನೆ ಕೊನೆಗೂ
ಇಂಥ ಬ್ರಹ್ಮಾಂಡದ ಪರಿಘವನೆ
ಸಂತತದಿ ಪೊತ್ತಿರುವೆ ಬಿಡುವಿನ
ಚಿಂತೆ ಪಡದಲೆ ಲೋಕಪಾಲಕ ಜನಕಜಾಮಾತಾ ||೨೯||

ಸಂಕಟವ ನೆಣಿಸದಲೆ ಮುಂದಿನ
ಶಂಕೆ ಪಿಡಿಯದೆ ನುಗ್ಗಿ ಹೊತ್ತಿಗೆ
ಡೊಂಕು ದುಗುಡುಗಳನ್ನೆ ಕಳೆದು ಜಗತ್ತಿನಲಿ ಶಾಂತಿ
ಅಂಕುರಿಸಲಿಕ್ಕೆಂದು ಸುಮ್ಮನೆ
ಶಂಕರನು ಹಾಲಾಹಲವನೆ
ಬೆಂಕಿಯಂತಹ ಸುಡುವ ವಿಷವನೆ ನುಂಗಿ ಬಿಡಲಿಲ್ಲೇಂ ||೩೦||

ಆ ತರದ ನಂಜಾದರೆನ್ನಯ
ಪಾತಕದ ಪರಿಭವಣೆ ನಿನ್ನೊಳು
ಪ್ರೀತಿ ಪಿಡಿದ ಬಳಿಕ್ಕೆ ಯುಳಿಯುವದೆಂತು ಪತಿತದೆಶೆ
ನೀತಿಹೀನನು ಮಂದಮತಿ ಪರ
ಘಾತಕನು ಸೋಮಾರಿ ಕೃಪಣನು
ಪೂತನಾರಿಯೆ ವ್ಯಸನಿಯೂ ನಾಂ ಮಲಿನಮಾನಸಿಯೂ|೨೧|

ಮೋಹಿಯಧಮಾಧಮನು ಸಜ್ಜನ
ದ್ರೋಹಿ ನಿಂದಕ ಪಿಸುಣ ಘನತರ
ಸಾಹಸದಿ ದುರ್ಮಾರ್ಗಿಯಾಗಿಹೆ ಬಹುದುರಾಚಾರೀ
ಈ ಹಣೆಯ ಬರಹದಲಿ ಬಿಗುವಿನ
ಕಾಹಿಲೆಯೊಳಾಶಾವಿಕಾರದಿ
ದೇಹದೊಳಗಿನ ಸಂದಿಗೊಂದಿಗೆ ಪಾಪ ತುಂಬಿಹುದ್ಕೆ ||೨೨||

ಉಕುತಿ ವಚನದೊಳಿಲ್ಲ ಮಧುರತೆ
ಅಖಿಲ ಜನರೊಳು ಪರಮ ನಿಷ್ಠುರ
ಸಕಲ ಪಾಮರರೊಳಗೆ ಹೆಚ್ಚಿನ ಪಾಮರನು ನಾನು
ಪ್ರಖರವೆನ್ನಪರಾಧರಾಶಿಯು
ಕಕುಲತೆಯೊಳೇ ಪೇಳ್ವೆನೆಂದರೆ
ಮಖಪ! ದಣಿಯುವದೆನ್ನ ನಾಲಿಗೆಯಿಷ್ಟು ವೆಗ್ಗಳವ್ಯೆ||೨೩||

ಅಂಟಿಕೊಂಡಿಹ ಕಾಮಕ್ರೋಧಕೆ
ಉಂಟು ದೇಹವು ಬೀಡಿನಂದದಿ
ತುಂಟ ಮತ್ಸರ ಕೆಟ್ಟ ಕಲ್ಪನೆ ದೃಢದಿ ನೆಲಸಿಹವೈ
ಗಂಟು ಬಿದ್ದಿಹ ವೆಲ್ಲ ದುರ್ಧರ
ಮಂಟ ಮೋಸದ ವೃತ್ತಿ ಮಿತ್ರರ
ಪಂಟನಿಂದಲಿ ಪಾರುಗಾಣಲು ದಾರಿಕಾಣದದು ||೩೪||

ಎಣಿಕೆ ಮಾಡಲ್ಕೆನ್ನೊಳಗಿನವ
ಗುಣ ಸಮೂಹದ ಚಿತ್ರ ಪೃಥಿವಿಯು
ಮಣೆಯು ಮೇಲ್ಬದಿನೆಂಟು ಭಾರ ವನಸ್ಪತಿಯು ಕೆತ್ತಿ
ಗಣನೆ ಮಾಡಲ್ಕಿಂದು ದೃಢ ಲೆ-
ಕ್ಕಣಿಕೆಯಿಂದಲಿ ಬರೆಯ ಪೋದರೆ
ಒಣಗಿ ಪೋಗುವದಾ ಸಮುದ್ರದ ತುಂಬ ಮಷಿಯೆಲ್ಲ ||೩೫||

ಇಂಥ ಪತಿತನ ದೋಷ ಪಾತಕ
ವೆಂತು ಕ್ಷಮಿಸುತ ತಾಳಿಕೊಳ್ಳುವೆ
ಚಿಂತೆ ಪೀಡಿಪುದೆನಗೆ ಕೋಮಲ ಹೃದಯ ಮಾಧವನೇ
ಮಂಥರೆಯು ಶಿಶುಪಾಲ ರಾವಣ
ದಂತವಕ್ತ್ರ ಸುಯೋಧನರ ಮದ
ಹಂತ ಪರಮ ಸಮರ್ಥ ನಿನ್ನಯ ಬಲವೆ ಮಿಗಿಲಿಹುದೈ ||೩೬||

ಪತಿತ ಪಾವನ ಶಾರ್ಙ್ಗಧರ ನೀ
ನಿತರರಂತಸಮರ್ಥನಲ್ಲಿವೊ
ಕಥೆ ಪುರಾಣಗಳೆಲ್ಲ ನಿನ್ನಯ ಮಹಿಮೆ ಪೊಗಳಿಹವೈ
ಸತಿಯಹಲ್ಯೆಯ ಶಾಪ ಮೋಚನೆ
ಗತಿಯು ನೀಡದ ಬಳಿಕ ಹಿಂದಿನ
ದತಿಶಯದ ಪಾಪಾಳಿಗಳನೆಣಿಸಲ್ಕೆ ಬಾರದೆಲಾ ||೩೭||

ಸಂಚಿತದ ಕರ್ಮಗಳ ಬಲದಿಂ
ಕಂಚುಕಿಯು ರಾಯನಿಗೆ ಸೇರಲು
ಕೊಂಚು ಹಳಿಯುಲ್ಲಾಗದವಳನು ರಾಜಭವನದಲಿ
ಮಂಚಕದ ಮೇಲ್ಪಟ್ಟದರಸಿಯ
ಮಿಂಚು ಹೊಳೆಯುವದವಳ ಮೋರೆಯು
ಮಂಚೆ ನೋಡುವರೆಲ್ಲ ಭಾಗ್ಯದ ಹರಿಕೆ ಹೊತ್ತವರೈ ||೩೮||

ಪರಿಸಮಣಿಗಾವಾಗ್ಗೆ ಲೋಹವು
ಬರಿದೆ ಸೋಂಕಲು ಪೂರ್ವಸ್ಥಿತಿಗತಿ
ಗುರುತು ಕಾಣದು ಕಬ್ಬಿಣದ ಬೆಲೆಗೆಂದು ಕೊಡರದನಂ
ಪರಿವ ಬಸಿನೀರುಗಳ ಕಾಲುವೆ
ಪರಿಪರಿಯ ಕೊಳಚೆಗಳು ಕೂಡಿರೆ
ಹೊರಗೆ ಗಂಗೆಯ ಕೂಡಲದಕೆ ಪವಿತ್ರ ಜಲವೆಂದೇ ||೩೯||

ಕರೆವರೆಲ್ಲರು ಪರಮಗಂಗಾ
ಸರಿತೆ ಜಲವೆಂದರಿದು ಮಿಾಯಲು
ಪುರದ ನರನಾರಿಗಳು ತಣಿವರು ಪಾನಗೆಯ್ಯುತಲಿ
ಅರಿದರೂ ತಾಂ ಕಾಗವಿಷ್ಠೆಯ
ಪರಿಸರದಿ ಪುಟ್ಟಿರುವ ಪಿಪ್ಪಲ
ತರುವಿಗೆನ್ನರು ನಿಂದ್ಯವೆಂದೆಂದಿಗು ಜನತೆಯೊಳಗೆ ||೪೦||

ಈ ವಿಧದಿ ನಾನಿಹೆ ಕುಜಾತಿಯು
ಭಾವಹೀನನು ಮತ್ತಮಂಗಳ
ಶ್ರೀವಿವೇಕ ವಿಚಾರ ಶೂನ್ಯನು ಪಿಸುಣನಪರಾಧಿ
ಆವ ಯೋಗದಿ ನಿನ್ನ ನಂಬುತೆ
ಜೀವ ಭಾವದಿ ಶರಣು ಬಂದಿಹೆ
ಕೇವಲನು ನಾನಿನ್ನು ನಿನ್ನವ ನೆನಿಸಿಕೊಳ್ಳುವೆನ್ನೈ ||೪೧||

ಕನ್ಯೆಯನು ಕೊಟ್ಟಾದ ಬಳಿಕದು
ಅನ್ಯ ಕುಲವೆಂದೆಣಿಕೆಯೇಕದು
ಧನ್ಯನೇ ನೀನೆನ್ನನಂಗೀಕರಿಸಿದಾ ಮೇಲೆ
ಪುಣ್ಯ ಪಾವನನಾದೆ ಮುನಿಜನ
ಮಾನ್ಯ ನಾಮಾಮೃತದಿ ದೇವ ವ—
ರೇಣ್ಯ ಪಾದಾಬ್ಜದೊಳು ದೃಢಭಕುತಿಯನೆ ಕೊಡು
ಸತತಂ ||೪೨||

ತಿಳಿದು ತಿಳಿದೂ ಸ್ವಾಮಿಯೆನ್ನೆತಕೆ
ಕೊಳೆತ ಹಣ್ಣಿನ ತೆರದಿ ಪಾಪದಿ
ತೊಳಲುತಿಹ ಪಾಮರನ ಸ್ವೀಕಾರವನೆ ಮಾಡಿರುವೆ
ಒಳಿತು ತಾನೆಂತದು ನಿನಗೆ ಯೆ
ನ್ನಳಿಸಲಾರದೆ ನೂಕಿ ಬಿಟ್ಟರೆ
ನಳಿನನಾಭನೆ ಹಳಿವರ್ಕೈ ಕ್ಕೈಲಾಗದವನೆಂದೇ ||೪೩||

ಉಚ್ಚರಿಸುವೆನು ನಾಮ ಮಂತ್ರವ
ಹೆಚ್ಚಿನದು ತಾನೆಷ್ಟು ಕರ್ಮವು
ನುಚ್ಚು ನೂರಾಗಿನ್ನು ಮಾಡಲು ಗದೆಯ ಪಿಡಿ, ಕರದಿ
ಕೆಚ್ಚೆದೆಯ ನರಸಿಂಹನೇ ಹರಿ
ಯಚ್ಯುತನೆ ನಿಜನಾಮ ಘೋಷದಿ
ಮೆಚ್ಚಿರಲು ಪರಿಬಾಧಿಪುದು ತನಗಾವ ಪಾತಕವೈ ||೪೪||

ನಿನ್ನ ನಾಮದೊಳಪರಿಮಿತ ವಾ
ಗಿನ್ನು ಶಕ್ತಿಯದಡಕವಾಗಿರೆ
ಕುನ್ನಿ ಪಾಪಗಳೆನ್ನದರ ಪಾಡೇನು ಚಿತ್ತೈಸೈ
ಅನ್ನುವರು ನಿಜನಾಮ ತಾರಕ
ವಿನ್ನು ಕಲಿಮಲ ದಹನ ಕಾರಕ
ಮುನ್ನ ಸಂಕಟ ನಾಶಕವು ಭವ ತಾರಕವು ಮತ್ತೆ ||೪೫||

ಪತಿತ ಪಾವನವಾಗಿಹುದು ಸ—
ದ್ಗತಿಗೆ ಸಾಧನ ಲೋಕದಲಿಯತಿ
ಹಿತದಿ ಯತಿಗಳು ನುತಿಸುವರು ಸಂತತದಿ ದೃಢಮನದಿ
ಪ್ರಥಿತ ಯಶವಾಗಿಹುದು ಮುಕುತಿಯು
ವಿತರಣೆಗೆ ಬಲು ಸುಲಭದಲಿ ಬಲ
ಧೃತಿಯ ದಯಪಾಲಿಸುತ ನಿನ್ನಡೆಗೆನ್ನ ಸೆಳೆಯುವದೈ ||೪೬||

ಈಗ ಬಿನ್ನೈಸುವೆನು ಕೇಳ್ವುದು
ಹೀಗಿರುವ ತವನಾಮ ದೂಳಗೇ
ವಾಗ್ವಿಲಾಸವ ದೆಲ್ಲ ಕಾಲದಿ ಸಾಗಿಸೆನ್ನೆನ್ನ
ಭಾಗ್ಯವಂತನೆ ಬೇಡುವೆನು ಯಾ
ವಾಗ ಲಾದರಿದೊಂದು ಹಂಕೆಯು
ರಾಗದಿಂದಲಿ ಮತಿಯು ನೆಲಿಸಲಿ ನಾಮದೊಳು ನಿನ್ನ ||೪೭||

ಪ್ರಾರ್ಥಿಸುವೆ ಕಮಲಾಪತಿಯೆ ದೃಢ
ಸ್ವಾರ್ಥವೆನ್ನದು ನಿನ್ನ ನಾಮವೆ
ಪಾರ್ಥ ಸಾರಥಿ ನೀನನಂತನು ಘನಪರಂಜ್ಯೋತಿ
ಪೂರ್ತಿಯಾಗದು ಮನದ ಹವಣಿಕೆ
ಮೂರ್ತಿ ನಿನ್ನದು ನಾಮದಲಿ ಪರ
ಮಾರ್ಥರೂಪದಿ ವೇಂಕಟೇಶನ ಬೆರೆತಿಹುದು ಸತತಂ ||೪೮||

ಎಷ್ಟು ಸಾಧ್ಯವದಷ್ಟು ಮಾತ್ರವೆ
ಶಿಷ್ಟ ಜನಕಭಿಮತವ ದಾಗಲು
ಸೃಷ್ಟಿಕರ್ತನ ಜನಕನೇ ಹರಿ ನಿನ್ನನಂತ ವಿಧ
ಸ್ಪಷ್ಟನಾಮಗಳೊಳಗೆ ಕೆಲವನೆ
ಕಷ್ಟನಾಶಕ ಸುಲಭವಾಗಿಹ
ವಷ್ಟು ನಾನಿನ್ನಲ್ಪಮತಿ ಸಪ್ರೇಮ ಪಾಡುವೆನೈ ||೪೯||

ಶ್ರೀನಿಧಿ ಶ್ರೀ ವೇಂಕಟೇಶನೆ
ಶ್ರೀನಿವಾಸನೆ ವಾಸುದೇವನೆ
ಮೀನಕೇತನ ಜನಕ ಪ್ರದ್ಯುಮ್ನನೆ ರಮಾಧವನೇ
ದಾನವಾಂತಕ ನಂತ ವಿಷ್ವಕ್
ಸೇನ ಸಂಕರ್ಷಣ ಜನಾರ್ದನ
ದೀನ ವತ್ಸಲನಾದಿ ಮೂರುತಿ ಚೆನ್ನಕೇಶವನೇ ||೫೦||

ಶ್ರೀಧರನೆ ನಾರಾಯಣನೆ ದಾ-
ಮೋದರನೆ ವಿಶ್ವಂಭರನೆ ಹರಿ
ಮಾಧವನೆ ಜಗದೀಶ ಜಗದುದ್ಧಾರ ಕಾರಣನೇ
ಆದಿ ಮತ್ತೆಯನಾದಿ ರೂಪನೆ
ಸಾಧು ಪೂಜಿತ ಪದ್ಮನಾಭನೆ
ಬೋಧರೂಪಿ ಪ್ರಕಾಶಗಹನನೆ ವರಪರಾತ್ಪರನೆ ||೫೧||

ವಿಷ್ಣುವೇ ಯನಿರುದ್ಧ ಸುಖವ-
ರ್ಧಿಷ್ಣುವೇ ನರಸಿಂಹ ವಾಮನ
ಕೃಷ್ಣನೇ ಭಾರ್ಗವನೆ ಬೌದ್ಧಕಲಂಕಿ ನಿಜಮೂರ್ತಿ
ವೃಷ್ಣಿ ಕುಲದೀಪಕನೆ ಗೋಪತಿ
ಜಿಷ್ಣು ಸಖ ಸಜ್ಜನರ ಜೀವನ
ನುಷ್ಣಕರ ಕುಲತಿಲಕ ಹನುಮತ್ಪ್ರಿಯನೆ ರಾಘವನೇ ||೫೨

ಪೂರ್ಣ ಬ್ರಹ್ಮ ಸನಾತನನೆ ವಿ-
ಸ್ತೀರ್ಣ ಸರ್ವ ವ್ಯಾಪಕನೆ ಯವ
ತೀರ್ಣನಾಗುತ ಭೂತಲದಿ ನರರೂಪಧಾರಕನೇ
ತೂರ್ಣದಲಿ ನೀನೊಲೆಯುವವ ಕ್ಷೀ
ರಾರ್ಣವದಿ ಮಲಗಿರುವ ನಾಗಿ ವಿ-
ದೀರ್ಣ ಮಾಡುವೆ ಸರ್ವ ಸಂಕಟಗಳನೆ ಶೀಘ್ರದಲಿ ||೫೩|

ಆದಿ ಪುರುಷನ ನಾಥರಕ್ಷಕ
ವೇದ ವಿನುತನೆ ಸಕಲ ಮಂಗಲ
ಮೋದಭರಿತನೆ ಮಂಗಲಾದೀಶನೆ ಗುಣಾತೀತಾ
ಮೇದಿನೀಶ ಗುಣಜ್ಞನೇ ನಿಜ
ಬೋಧರೂಪಿ ನಿಮಗ್ನನೇ ಶ್ರೀ—
ಪಾದಭೂಮಿಯ ಬೇಡಿದಾತ ನಖಂಡ ವಿಕ್ರಮನೇ ||೫೪||

ಈಶನೇ ಸುಖ ಮೂರ್ತಿಯೇ ನಿ—
ರ್ದೋಷನೇ ಪರಿಶುದ್ಧ ಸಾತ್ವಿಕ
ವಾಸುದೇವನೆ ಸುಜ್ಞನೇ ಗುಣಪ್ರಾಜ್ಞ ಗಿರಿಧರನೇ
ಶೇಷ ಶಯನನೆ ಸಾರ್ವಭೌಮನೆ
ಭಾಸುರಾಂಗ ನಿರೂಪಮನೇ ಹೃಷಿ
ಕೇಶನೇ ಪರಮೇಶ್ವರನೆ ನಿಜಭಕ್ತ ಪ್ರಿಯಕರನೆ ||೨೨||

ಗರುಡ ವಾಹನ ವೀರನೇ ಸುಖ
ಕರನು ನೀನೊಬ್ಬನೇ ಕೃಪಾ ಸಾ
ಗರನೆ ಕರುಣಾಲಯನೆ ಗೋಪೀ ಜನಮನೋಹರನೇ
ನಿರುತದಲಿ ಶ್ರೀವತ್ಸಲಾಂಛನ
ಧರನೆ ಭಯ ಕೃದ್ಭಯ ವಿನಾಶಕ
ಚಂತ ನಿಖಿಲ ನಿರಂಜನನೆ ನೀನಸುರ ಮರ್ದನನೇ ||೨೬||

ಉರ್ವಿಪೀಡಕ ದುಷ್ಟದೈತ್ಯರ
ಸರ್ವ ಚಮು ಸಂಹಾರ ಕಾರಕ
ನಿರ್ವಿಕಾರ ವಿವೇಕಮುನಿ ವೈರಾಗರನೆ ಹರಿಯೇ
ಗರ್ವರಹಿತನೆ ಯುಗ್ರ ಮೂರ್ತಿಯೆ
ಶರ್ವಸಖ ವೈಕುಂಠವಾಸಿಯೆ
ನಿರ್ವಿವಾದ್ಯನೆ ಮೂಲಮೂರ್ತಿಯೆ ಮುನಿಜನ ಧ್ಯೇಯ ||೨೭||

ಶಂಖಚಕ್ರ ಗದಾಧರನೆ ನಿ:
ಶಂಕ ಮಧುಮುರ ದೈತ್ಯ ಸಂಹರ
ಪಂಕಜಾಸನ ಪಿತನೆ ಪುರುಷೋತ್ತಮ ಪರೇಶವಿಭೋ
ಅಂಕಿತರ ಗುಣದೋಷ ನೆಣಿಸದೆ
ಸಂಕಟದಿ ಕಡೆಹಾಯಿಸುವವನೆ
ಲಂಕೆಯನೆ ಬಿಭಿಷಣಗೆ ಕೊಟ್ಟಿರುವಂಥ ಮಹನೀಯಾ ||೫೮||

ವಿವಿಧ ನಾಟಕ ಸೂತ್ರಧಾರಿಯೆ
ಭವಭಯದ ಪರಿಹಾರ ಮಾಡುತೆ
ನವವಿಧಾ ಭಕುತಿಯಲಿ ಬೆರೆಯುವ ದೃಢಮತಿಯನೀಡ್ವೈ
ಸವಿಯಖಂಡ ಸ್ವಭಾವ ನಿನ್ನಯ
ಕವಿಗಳೆಲ್ಲರು ಸಾರಿಹರು ನವ
ನವಲ ಗುಣಧಾಮನೆ ಸ್ವಭಕ್ತರ ಪಕ್ಷಪೂರಕನೇ ||೫೯||

ಈ ಜಗದ್ವ್ಯಾಪಕನು ನೀಂ ದ್ವಿಜ
ರಾಜರಥ ನಚ್ಯುತನು ಸುರಮುನಿ
ಪೂಜಿತನೆ ನಿನಗಗ್ರ ಪೂಜೆಯ ಮಾನಲಭಿಸಿಹುದೈ
ರಾಜಿಸುವ ಘನಪುಣ್ಯ ಮೂರ್ತಿಯೆ
ಸೋಜಿಗದ ಗುಣಗಾನ ಶ್ರುತಿತತಿ
ಕೂಜನವ ನಡೆಸಿದುದೆ ಕೇಳುವದೊಂದೆ ಸಾಧನವು ||೬೦||

ಹರಿಯೆ ಗರುಡಧ್ವಜನೆ ವಿಷ್ಣುವೆ
ಕರಿವರದ ವೈಕುಂಠ ನಾಯಕ
ಸಿರಿಯುರಸ ಸನಕಾದಿ ವಂದ್ಯನೆ ಪದ್ಮನಾಭವಿಭೋ
ಗಿರಿಧರನೆ ಗೋವಿಂದ ಕೌಸ್ತುಭ
ಧರಿಸಿರುವೆ ಗದೆ ಶಂಖ ಚಕ್ರವ
ಮೆರಸಿ ಬಿರುದನು ನಿರುತದಲಿ ಪೊರೆ ಚರಣಕೆರಗುವೆನೈ ||೬೧||

ನಂದನಂದನ ಗೋಪ ಗೋಕುಲ
ವೃಂದ ಪಾಲಕ ಮುರಲಿಧರ ಗೋ—
ವಿಂದರಾಧಾ ಹೃದಯವಲ್ಲಭ ಶ್ಯಾಮಸುಂದರನೇ
ವಂದಿಸುವೆ ಚರಣಾರವಿಂದ ಮು—
ಕುಂದ ಕುಂಜವಿಹಾರಿ ಹರಿ ಮುಚ
ಕುಂದ ವರದ ಕರಾರ ವಿಂದದಿ ಬಂದು ಪಿಡಿಯೆನ್ನಂ ||೬೨||

ಈ ಸಮಯದೊಳು ನಿನಗೆ ಕಾಣುವ
ದಾಸೆ ಬಹು ಪುಟ್ಟಿಹುದು ಹೃದಯ ಪಿ—
ಪಾಸೆ ತಣಿಸಲುಬೇಕು ಮನದಿಂದೆನುತ ಮೊರೆಯಿಡಲು

ಈಶನತಿ ಸಂತುಷ್ಟನಾಗುತೆ
ಭಾಸಮಾನನು ಹೃದಯದೊಳು ತಾಂ
ಭಾಸುರಾಂಗನು ವೇಂಕಟೇಶನು ಪ್ರಕಟನಾಗುವನೈ ||೬೩||

ಹೃದಯದೊಳಗಾವಿರ್ಭವಿಸುವಾ
ಪದುಮನಾಭನ ದಿವ್ಯಮೂರ್ತಿಯು
ದುದಿತ ದಿನಮಣಿಯಂತೆ ಕಂಗೊಳಿಸಲು ಸಗುಣರೂಪಂ
ಮುದದಿ ನೋಡಲು ಸುಖದನಿಧಿ ತಾ
ನೊದಗಿ ಯುನ್ಮನಿ ಗತಿಯು ಸಂಭ್ರಮ
ವದನದಿಂದಲಿ ಪೇಳೆ ಬಣ್ಣಿಸಲಾಗದಂತಿಹುದು ||೬೪||

ಅತಿ ಮಧುರವದು ಪರಮ ಕೋಮಲ
ಸ್ಮೃತಿಯು ಪರಮಾನಂದ ಲಹರಿಯು
ಗತಿಯು ಸಲೆ ಪ್ರವಿಮಲದ ನೈಜ ಸುಖಾನುಭೂತಿಯೆನೇ
ಮತಿಯು ನಿಶ್ಚಲವಾಗಿ ಧ್ಯಾನದ
ರತಿಯು ಗಹನ ಸುಖಾನುಭವಕದೆ
ಸತತ ಚಿತ್ತದಿ ನೆಲಸಲೆಂದೆಯೆ ಬಯಸಿಬೇಡುವದೈ ||೬೫||

ಆ ಕರುಣನಿಧಿ ರೂಪವೆಲ್ಲವ
ಲೌಕಿಕದ ಸ್ಥಿತಿಯಲ್ಲಿ ನೆನೆಯುತೆ
ಮೂಕನಾದೆನು ಹೊರಗೆ ಪೇಳಲ್ಬಲವು ತನಗಿರದೈ
ಶ್ರೀಕರನು ಕರುಣಿಸುತ ಲೆನ್ನಯ
ಶೋಕಹರ ವಾಕ್ಸುಧೆಯ ಸುರಿಮಳೆ
ಶ್ಲೋಕ ಕವನದ ರೂಪದಿಂ ಹೊರಪಡಿಸಿದುದನೊರೆವೆಂ |೬೬|

ಇಂದಿರಾ ಪತಿಯಾ ಸ್ವರೂಪವು
ಸುಂದರವದತ್ಯಂತ ವಾಗಿಯೆ
ಚಂದದಿಂದಲಿ ಪೇಳುವೆನು ಸಾದರದಿಕೇಳುವದೈ
ಇಂದು ಶ್ರೋತ್ರಗಳೆಲ್ಲ ಭಾಗ್ಯದ
ಸಿಂಧು ಹರಿಕೃಪೆ ಪಡೆಯಲೋಸುಗ
ದಂದುಗದಿ ಪಾರಾಗಲೀ ಕಲಿಯುಗದಿ ಪಥಸುಗಮಂ ||೬೭||

ಮಾರ ಪಿತನದು ತನುವು ಶ್ಯಾಮಲ
ಸಾರ ಚಿನ್ಮಯ ಮೃದುಲತರ ಸುಕು
ಮಾರ ಕುಂಕುಮ ರಕ್ತ ಕಮಲದ ತೆರದಿ ಪದಪದ್ಮಂ
ನೇರವಾಗಿ ಸುರೇಖಿಸಿರುವವು
ಚಾರು ಬೆರಳತಿ ಶೋಭಿಪವು ತಮ
ಹಾರಿ ಚಂದ್ರನ ರೇಖೆಯೆಂದದೊಳು ಗುರುಗಳ ಹೊಳೆವು|೬೮|

ಥಳಥಳಿಪ ವಾರಕ್ತ ವರ್ತುಲ
ತಲದಿ ವಜ್ರಾಂಕುಶದ ಚಿಹ್ನದ
ತೊಳಗುತಿಹ ಧ್ವಜ ಸೂರ್ಯನಾ ಪ್ರಭೆಯಂತೆ ತಮಹರವು
ತೊಳೆದ ಕಾಲಿನ ನೀರು ಗಂಗೆಯು
ಜಳಕದಿಂದಲಿ ಪುನಿತ ಮಾಡುವ
ಸಲಿಲ ಮಹಿಮೆಯ ಪೆತ್ತ ಪಾದಾಂಬುಜವ ಧ್ಯಾನಿಪುದೈ |೬೯

ಇಂದ್ರ ನೀಲದ ಪರಿಯಪೂರ್ವವು
ಚಂದವೊಪ್ಪುವ ಕಾಲು ಹರಡಿನ
ಸಂದುಗಳ ಮೇಲ್ ರಚಿತ ರಂಜನ ಭೂಷಣಗಳಿರವೂ
ಸುಂದರವು ಕಾಲ್ಗಡಗ ಗೆಜ್ಜೆಗ—
ಳಿಂದು ಮಂಜುಲ ನಾದ ಹೊರಡಲು
ಮಂದಮತಿ ಸಂಸಾರಬದ್ಧರ ಮನವಸೆಳೆಯುವದೈ ||೭೦||

ಬಾಳೆಗಂಬದ ಪರಿಯ ಹೋಲಿಕೆ
ಮೇಲು ಸರಲತೆ ಕಾಂತಿ ಬಳಕುತೆ
ಶ್ರೀಲಕುಮಿ ಮೃದುಕರದಿ ಯೊತ್ತುತೆ ತಣಿದು ತಣಿಸುವಳೈ
ಕೀಲುಗಳ ಪರಿ ನಡುವೆ ಸರಿ ಮೊಣ
ಕಾಲುಗಳು ಶೋಭಿಪವು ತೊಡೆಗಳು
ಗೋಲು ಮೈಕಟ್ಟಿನವು ಭಕುತರು ಕೂಡಲಾಸನವುಂ ||೭೧||

ನಡುವೆ ವಿಶ್ವೋತ್ಪತ್ತಿಯು ಸ್ಥಲ
ದುಡುಪು ಪೀತಾಂಬರದ ಶೋಭೆಯು
ಬಿಡದೆ ಯಾಗಸದೊಳಗೆ ಮಿಂಚುವ ಮಿನುಗು ಕಾಣುವದೈ
ಒಡವೆ ಚಿನ್ನದ ರತ್ನ ಮಾಣಿಕ
ನಡುನಡುವೆ ಯಡುದಾರಿನಲಿ ಕಡೆ
ಗೊಡೆದು ಕಾಣಿಸಿ ಹೊಳೆದು ಕಣ್ಣುಗಳನ್ನು ತಣಿಸುವವೈ |೭೨|

ಕಮಲಜಾಸನ ಪುಟ್ಟಿದಾಮನೆ
ವಿಮಲ ನಳಿನದ ನಾಭಿಕಮಲವು
ತಿಮಿರಯುತ ಗಿರಿಕುಹರದಂದದಿ ನಿಮ್ನವಾಗಿಹುದೈ
ಅಮುಕಿ ತ್ರೈಲೋಕ್ಯಗಳು ತ್ರಿವಳಿಯು
ರಮೆಯುರಸ ನುದರವದು ಗಹನವು
ಸಮಿಪದಲಿ ಶ್ರೀವತ್ಸಲಾಂಛನ ಮೆರೆವ ಭೂಷಣವು ||೭೩||

ನಿಲಯವದು ಲಕುಮಿಯದು ವಕ್ಷ
ಸ್ಥಲವು ಕೌಸ್ತುಭ ಪದಕ ಶೋಭೆಯು
ಗಲಿತ ಮದನಾಗುವನು ಚಂದ್ರನು ಮೋರೆಯನೆ ಕಂಡು
ಕೆಳಗೆ ಮಾಡುವ ನಿನ್ನ ಮುಖ ಪರಿ
ಮಲ ಸುವಾಸನೆ ವೈಜಯಂತಿಯು
ಹೊಳವು ವಿದ್ಯುಲ್ಲತೆಯು ಪರಿಯದು ಲಖಲಖಾಟದೊಳು |೭೪|

ಅದರ ಮೇಲಣ ಕಂಠಸ್ಥಾನವ
ನದುರದಲೆ ಯವಲೋಕಿಸುತಿಹರು
ಬುಧರು ಮುನಿಗಳು ಹಾರಕೇಯೂರವನೆ ಧರಿಸುವ
ಮದಕರಿಯು ಶುಂಡಗಳ ತೆರದಿಂ
ಬದಿಗೆ ಭುಜಗಳು ನಾಲ್ಕು ಕೈಗಳು
ಗದೆ ಸುದರ್ಶನ ಶಂಖ ಪದ್ಮಗಳನ್ನು ಧರಿಸಿಹವೈ ||೭೫||

ಅಂಚು ಸಾವಿರದಿಂದೆ ಕೂಡಿದ
ಚಂಚಲಗತಿ ಸುದರ್ಶನವು ರಾ-
ತ್ರಿಂಚರರ ಸಂಹಾರಕರ ಕೌಮೋದಕೀ ಗದೆಯು
ಪಾಂಚಜನ್ಯ ವರೇಣ್ಯ ಶಂಖವು
ಕಾಂಚನದ ಕಾಂತಿಯುದ ಪದ್ಮವು
ಮಿಂಚುವವು ಕೈಗಳು ಸಮರ್ಥನ ಕಾರ್ಯತತ್ಪರವು ||೭೬||

ಚಲುವ ಕರಗಳ ತುದಿಗೆ ರಾತ್ರೋ
ತ್ಪಲದ ಪರಿಯುಗುರುಗಳು ಸೋಮನ
ಬೆಳಕಿನಂದದಿ ಹೊಳೆವ ತೇಜೋವಲಯ ತಾರೆಗಳು
ಮಿಲಿತ ಮಧುರಧ್ವನಿಯ ಕಂಕಣ
ವುಲಿವುವಾ ಮುಂಗೈಯ ಬಳಿ ಪಲೆ
ಗಿಳಿಗಳಂದದಿ ವಾಕ್ಯಶ್ರುತಿ ವೇದಾಂತ ಗರ್ಭವನುಂ ||೭೭||

ಬಾಹುಗಳ ಮೇಲ್ಬಾಹು ಭೂಷಣ
ಮೋಹಕರ ಕಂಠಾಭರಣಗಳು
ದೇಹಕದ್ಭುತ ಕೊಡುತಿಹವು ಸೌಂದರ್ಯ ಸೋಜಿಗವಂ
ಊಹಿಸಲು ಬಣ್ಣಿಸಲಸಾಧ್ಯವು
ಸಾಹಸಕೆ ಮೀರಿಹುದು ಪಕ್ಷೀ
ವಾಹನನ ರೂಪವದು ಮನದುನ್ಮಾವ ಮಾಡುವದೈ ||೭೮||

ಕುತ್ತಿಗೆಯ ಮೇಲಿರುವ ಶ್ರೀಮುಖ
ಉತ್ತಮರು ಧ್ಯಾನಿಪರು ಹಗಲಿರ
ಳತ್ಯಧಿಕ ಭಕುತಿಯಲಿ ಯೇಕಾಗ್ರತೆಯ ಮನದಿಂದೆ
ಚಿತ್ತಹರವು ಸುನೀಲಗದ್ದವು
ಮತ್ತೆ ಶೋಭಿಪುದೆಲ್ಲ ಕಲೆಗಳ
ಪೊತ್ತ ಚಂದ್ರಮನಂತೆ ಸುಖಕರ ನೋಟಕಾಗಿಹುದೈ ||೭೯||

ಎರಡು ತುಟಿಗಳ ನಡುವೆ ಹಲ್ಲುಗ—
ಳಿರವು ಹೊಳೆಯುತ ಕುಂದ ಸಮನಗ
ಳರಳಿದಂತೆ ಸುಹಾಸ್ಯಭಾವವ ತೋರಿತೊಳಗುವವೈ
ಬರಲು ಕರು ಕೆಚ್ಚಲ ಸಮೀಪಕೆ
ತೊರವು ತಾನೆಯೆ ಬಿಡುವ ಪರಿಯಲಿ
ಪರಮಭಕುತರ ಧ್ಯಾನಯೋಗದ ಹೃದಯಲಯವಿಹುದೈ|೮೦|

ಅತಿ ಮಧುರವಾಗಿರುವ ದಧರಾ
ಮೃತದ ಪ್ರಾಪ್ತಿಯ ಸವಿಸುಖದ ತರ
ಗತಿಯ ಬಲ್ಲವಳೊಬ್ಬ ಲಕುಮಿಯ ಪೂರ್ಣಸಮರಸತೆ
ಶ್ರುತಿ ಮನೋಹರ ಗಾನ ಕುಶಲತೆ
ಧೃತ ಮುರಲಿ ಬೇರೊಂದು ಸುರುಚಿರ
ರತಿಯ ಹೊಂದಿಹುದಿನ್ನು ಶ್ರೀಹರಿ ಸನ್ನಿಧಿಯ ಪಡೆದು||೮೧||

ಬಾಲಬಾಲಿಕೆಯರ ಜೊತೆಗೆ ಗೋ—
ಪಾಲನಾಗುತ ಕಳ್ಳತನದಲಿ
ಹಾಲು ಮೊಸರನು ಕುಡಿದು ಗೋಕುಲದೊಳಗೆ ನಿತ್ಯದಲಿ
ಸಾಲು ಪಂಕ್ತಿಯ ಕೂಡಿ ನೀಡಿದ
ಮೇಲು ತರದನ್ನವನೆ ಸವಿದಿಹ
ನಾಲಿಗೆಯು ಶೋಭಿಪುದು ಘನಲಾವಣ್ಯ ಜ್ಯೋತಿಯನೆ |೮೨|

ಸರಲ ಸುಂದರವಾದ ನಾಸಿಕ
ವರಳುತಿಹ ಚಂಪಕದ ಕಲಿಕೆಯೆ
ನಿರುತದಲಿ ಮರುತನಿಗೆ ಯಾಶ್ರಯಸ್ಥಾನಸುಖಮಯವುಂ
ಧರೆಯ ಪೊತ್ತ ವರಾಹನಾಗಿಹ
ಮುರಹರನ ಮೂಗವನೆ ಮೊದಲಿಗೆ
ಗರುಡವಾಹನ ಭಕುತರೆಲ್ಲರು ಧ್ಯಾನಿಪರು ಮನದಿಂ ||೮೩||

ಲಖಲಖಿತ ವಾಗೆರಡು ಬದಿಯೊಳ
ಧಿಕವಿರುವ ತೇಜಸ್ಸಿನಿಂದಲಿ
ಪ್ರಕಟ ಗಂಡಸ್ಥಲವು ಬೆಳಗಿಹುದೆರಡು ಬದಿಯಲ್ಲಿ
ಭ್ರುಕುಟಿಯುಗ ವೇಂಕಟ ಸುನೀಲವು
ನಿಕಟದಲಿ ರೆಪ್ಪೆಗಳು ಚಂದವು
ಸುಖವಿಕಾಸದ ನಯನ ಯುಗ್ಮವದಿನ್ನು ಶೋಭಿಪುದೈ||೮೪||

ಕಮಲದೋಪಾದಿಯಲಿ ಕಾಣುವ
ವಿಮಲ ಶೋಭೆಯ ಕಣ್ಣುಗಳು ಭವ
ಭ್ರಮೆಯ ಕಾರ್ಗತ್ತಲೆಯ ಹರಿಯುವ ಕಿರಣನೆಸೆಯುವವೆ
ಶ್ರಮಹರವು ನವ ಜೀವನೋತ್ಸವ
ಸುಮನ ವರಳಿಸುವವು ಜಗತ್ರಯ
ಪ್ರಮುದಿತಂತಾಂ ಮಾಳ್ಪ ಕರುಣಾ ದೃಷ್ಟಿ ಸಂಪದವೈ ||೮೫||
ಕಿವಿಯೊಳೆರಡೂ ಬದಿಗೆ ಕುಂಡಲ
ನವಲಕರ ಮಕರಾಕೃತಿಯ ತರ
ದವು ಬೆಳಗುತಿಹ ಮೆಲ್ಲಗಲ್ಲಾಡುತಲಿ ಯಭಿನಯದಿ
ಅವನಿಯೊಳಗಿನ ಭಜನೆ ಕೀರ್ತನೆ
ಶ್ರವಣ ಮಾಡಲು ದೀನ ಕರುಣಾ
ರವಗಳನೆ ತತ್ಕಾಲ ಕೇಳಲು ತತ್ಪರತೆ ತಳೆದ ||೮೬||

ಭಾಲ ಪಟಲದ ಸ್ಥಿತಿಯು ಸುಖದ ವಿ—
ಶಾಲ ವಾಗಿಹುದತಿ ಸುರೇಖಿತ
ಮೇಲು ಮಧ್ಯದಿ ಕಸ್ತುರಿಯ ತಿಲಕವದು ಶೋಭಿಪುದೈ
ನೂಲು ರೇಶಿಮೆಗಿಂತ ಮೃದು ಸೀ—
ಲಾಲಕವು ವಕ್ರತೆಯ ಹೊಂದುತ
ಗೋಲು ವರ್ತುಲ ದರ್ಧಪರಿಯಲಿ ಶೋಭೆಕೊಡು
ತಿಹವೈ ||೮೭||

ಒಟ್ಟು ಮಾಣಿಕ ಮುತ್ತು ರತ್ನದ
ದಟ್ಟ ಹೆಣಿಕೆಯ ಚಂದದಲಿ ಹದ
ಗಟ್ಟಿಯಾಗಿಹ ಮುಕುಟ ಕಿರಿಟವು ಮಸ್ತಕದ ಮೇಲೆ
ತೊಟ್ಟನೈದೆ ಮಯೂರ ಪಿಚ್ಛವ
ಕಟ್ಟಿರುವ ದೇದೀಪ್ಯ ಮಾನದ
ಗುಟ್ಟು ಮನದಲಿ ನೆಲಿಸಲೋಸುಗ ರೂಪ ಶೃಂಗಾರಂ ||೮೮||

ಬೋಧವಾಯಿತು ನಿನ್ನ ರೂಪದ
ಶ್ರೀಧರನೆ ನೀನೆನ್ನ ಭಕುತಿಹ
ಸಾಧನಕೆ ಸತ್ಫಲವ ನೀಡಲು ಸಗುಣತನು ತೊಟ್ಟೆ
ಆದರದಿ ಮೇಣಾರ್ಷಭಾವದೊ—
ಳಾಧುನಿಕ ಸೌಕರ್ಯದಲಿ ದೇ—
ವಾಧಿ ದೇವನೆ ಪೂಜೆಯನು ಕೈಕೊಳ್ಳು ಪ್ರೀತಿಯಲಿ ||೮೯||

ಧ್ಯಾನ ಮಾಳ್ಪೆನು ಸರ್ವಭಾವದಿ
ಸಾನುರಾಗದೊಳಾಗು ಸನ್ಮುಖ
ಮೌನದಾಸನ ವರ್ಘ್ಯ ಪಾದ್ಯಗಳನ್ನೆ ನೀಡುವೆನೈ
ಸ್ನಾನ ಮಾಡಿಸಿ ಮತ್ತೆ ಸುಮನಸ
ಧೇನುವಿನ ಪಾಲ್ಮೊಸರು ತುಪ್ಪವ
ಜೇನುರಸ ಸಕ್ಕರೆಯ ಪಂಚಾಮೃತದಿ ಸ್ನಪಿಸುವೆನೈ ||೯೦||

ಗಂಗೆಯನೆ ಮೇಲ್ಸುರುವಿ ಶ್ಯಾಮಲ
ನಂಗಹಸನವ ಮಾಡಿ ತೈಲಾ—
ಭ್ಯಂಗವನೆ ಮಾಡುತಲಿ ಸುಖದ ಸುವಾಸದೆಣ್ಣೆಯನೆ
ರಂಗನಿಗೆ ಪೂಸುತಲಿ ಹಾಕುವೆ
ಮಂಗಲ ಸ್ನಾನವನೆ ಬೇಗನ
ನಂಗ ಪಿತನ ಮಹಿಮ್ನ ಸೂಕ್ತಗಳನ್ನೆ ಪಠಿಸುತ್ತೆ ||೯೧||

ಪುರುಷ ಸೂಕ್ತವ ವಿಷ್ಣು ಸೂಕ್ತವ
ಸ್ವರಸಹಿತ ಪವಮಾನ ಪಠಿಸುತ
ಲೆರೆದು ಬಿಸಿನೀರಿನದ ಧಾರೆಯ ಮೃದುಲ ಸುಖಕರವ
ಒರಿಸಿ ಮೈಯನೆ ವಸ್ತ್ರ ಭೂಷಣ
ಕೊರಳೊಳಗೆ ಯಜ್ಞೋಪವೀತವ
ಪರಿಮಲದ ಗಂಧಾಕ್ಷತೆಯ ಪೂಮಾಲೆಯರ್ಪಿಸುವೆಂ ||೯೨||

ಜಲಜನಾಭನ ಮುಖ್ಯ ಪೂಜೆಯ
ಫಲವು ಶಿಗುವದು ತಾನೆ ತುಲಸಿಯ
ದಲವ ನೇರಿಸಲೊಂದು ಭಾವದಿ ದೇವನೊಲಿಯುವನೈ
ಲಲಿತ ಕಾಲೋದ್ಭವ ಸುಗಂಧದ
ಜಲಜ ಮಲ್ಲಿಗೆ ಸಂಪಿಗೆಯ ಬಕು
ಲಲರುಗಳ ಪರಿಮಳವ ಬೀರುವ ವೆಲ್ಲವರ್ಪಿಸುವೆಂ ||೯೩||

ಶ್ರೀಪತಿಗೆ ತರತರ ವನಸ್ಪತಿ
ಧೂಪಗಳ ನಾಘ್ರಾಣಿಸಲು ಸಲೆ
ದೀಪ ನೀರಾಜನಗಳನೆ ಬೆಳಗುವೆನು ಮೋದದಲಿ
ಸೂಪಶಾಸ್ತ್ರದ ಗತಿಯು ತಿಳಿದಪ
ರೂಪ ಪಕ್ವಾನ್ನಗಳ ರಾಶಿಯು-
ಮೂಪ ರುಚಿ ನೈವೇದ್ಯವನೆ ಯರ್ಪಿಸುವೆನೈ ದೇವಾ ||೯೪||

ಆಯುರಾರೋಗ್ಯ ಪ್ರದದ ಪಾ—
ನೀಯವನೆ ಮಧ್ಯದಲಿ ಕೊಡುವೆನು
ಶ್ರೀಯಶೋಧನ ಬೆಳೆಸುವಾ ತಾಂಬೂಲ ದಕ್ಷಿಣೆಯು
ಕಾಯ ಭೂಷಣ ಪಚ್ಚಮಣಿ ವೈ
ಡೂರ್ಯ ಮಾಣಿಕ ಪದ್ಮರಾಗದ
ಸೂರ್ಯಕಾಂತಿಯ ತೇಜ ಗೋಮೇದಾದಿ ನವರತ್ನ ||೯೫||

ಹಾರವನೆ ಸೂಡುವೆನು ಮಂಗಲ
ಕಾರಕ ಶ್ರೀಫಲಕದಳಿ ಖ—
ರ್ಜೂರ ದಾಡಿಮ ದ್ರಾಕ್ಷ ಮೊದಲಾದವುಗಳರ್ಪಿಸುವೆಂ
ಭೇರಿ ದುಂದುಭಿ ಕಹಳೆ ಜಾಂಗಟೆ
ತಾರಸ್ವರದಲಿ ಹಾಡುತಲಿ ಪಂ—
ಚಾರತಿಯ ಕರ್ಪೂರ ಮಂಗಲ ದೀಪಬೆಳಗುವೆನೈ ||೯೬||

ಲಕ್ಷದೀಪವ ಬೆಳಗಿ ಕುಂಕುಮ
ದಕ್ಷತೆಯ ವರ ಮಂತ್ರ ಪುಷ್ಪವ
ಪಕ್ಷಿವಾಹನ ಗರ್ಪಿಸುತೆ ಸಾಷ್ಟಾಂಗವೆರಗುವೆನ್ನೈ
ಅಕ್ಷಯಾಶೀರ್ವಾದ ಶಿಗಲಿ ಪ್ರ
ದಕ್ಷಿಣೆಯ ಹಾಕುವೆನು ಮೆಲ್ಲಗೆ
ಲಕ್ಷ್ಮಣಾಗ್ರಜ ಪ್ರೀತನಾಗಲಿ ಸೇವೆ ಮನ್ನಿಸುತೆ ||೯೭||

ಏಳು ಜನ್ಮ ದರಿದ್ರತನ ನಿ—
ರ್ಮೂಲ ಮಾಡುವ ಪೂಗಿಫಲ ತಾಂ—
ಬೂಲ ದಕ್ಷಿಣೆ ಕೊಡುವೆನ್ನೈ ಹದಿಮೂರು ಗುಣದಿಂದ
ಮಿಾಲಿತವದಾಗಿಹುದು ಸುರುಚಿರ
ಶೀಲಸಂಪದ ವಿದ್ಯೆ ಯಶ ದಯ
ಪಾಲಿಸಾರೋಗ್ಯಾಯುಗಳ ಪ್ರಾರ್ಥನೆಯ ನರ್ಪಿಸುವೆಂ |೯೮|

ಕೀರ್ತಿಘನ ನಿನ್ನನ್ನು ಕೊನೆಯಲಿ
ಪ್ರಾರ್ಥಿಪೆನು ಸನ್ನಾಮ ಧ್ಯೇಯನೆ
ಮೂರ್ತಿ ನಿನ್ನದಗಮ್ಯ ವಾಗಿರಲೆನ್ನ ಪೂಜೆಗಳ
ಸಾರ್ಥಕವದಾಯ್ತೆನ್ನ ಜನ್ಮದ
ವಾರ್ತೆ ಮರಣದ ದೂರವಾಯಿತು
ಪಾರ್ಥಸಾರಥಿ ನಾಮಮಾತ್ರೆಯ ತೀರ್ಥವಘಹರವುಂ ||೯೯||

ಈ ಯಥಾವಿಧಿ ಪೂಜೆಯನೆ ಭವ—
ದೀಯ ಕೃಪೆಯಿಂದಲಿ ಮುಗಿಸಿಹೆನು
ಶ್ರೀಯುವನ್ನರ್ಪಿಸುವೆನ್ನೈ ಸುಪ್ರೇರಕನು ನೀನೇ
ಆಯುತಾಂಬಕ ಬೇಡುವೆನು ಫಲ
ದಾಯಿ ನಿನ್ನ ವರಪ್ರಸಾದವ
ವಾಯುತನಯನಿಗೊಲಿದಿರುವೆ ಯೆನಗಿನ್ನನುಗ್ರಹಿಸೈ ||೧೦೦||

ಜಯಜಯಾ ಪರಬೊಮ್ಮನೇ ಚಿ—
ನ್ಮಯಗುಣಾ ತೀತನೆ ಸಮರ್ಥನೆ
ಸುಯಶಚರಿತನೆ ಹೃದಯವಾಸಿಯೆ ರಾಮರಾಘವನೇ
ಭಯನಿವಾರಕ ಪಂಕಜಾಕ್ಷನೆ
ದಯದಿ ನೋಡು ಜಗದ್ಗುರುವೆ ನೀಂ
ಪಯನಿಷೇವಣ ದಕ್ಷಜಗದೋದ್ಧಾರ ಕೃತಿರತನೇ ||೧೦೧||

ಅಗಮ ಶ್ರುತಿ ಶಾಸ್ತ್ರಾದಿ ಗ್ರಂಥದ
ಬಗೆಬಗೆಯ ತರ್ಕಗಳ ವಚನದಿ
ಸುಗಮ ನೀನಿರದಿದ್ದರೂ ನಿಜಭಕ್ತ ಸಖನಿರುವೇ
ಮುಗಿಲಿನಂತವ್ಯಕ್ತ ವ್ಯಕ್ತನೆ
ಸಗುಣ ಕಮಲಾಧೀಶ ಜಯಜಯ
ಪ್ರಗತಿಪರ ಸುಖಮೂರ್ತಿ ಪೂರ್ಣಪರೇಶನಾಗಿರುವೇ||೧೦೨||

ಭೂತಲದಿ ನಿಜ ಭಕ್ತರಕ್ಷಕ
ಪೂತನಾರಿ ನಿರಂಜನನೆ ಕಪಿ
ಯೂಥನಾಯಕ ಪ್ರಿಯಪರಾತ್ಪರ ಗಹನ ಜಗಪಾಲಾ
ಮಾತನೊರೆವೆನು ಕೇಳು ಶೂನ್ಯಾ
ತೀತ ನಿರ್ಗುಣ ಸಗುಣ ನಟನೆಯ
ಪ್ರೀತಿಯಲಿ ವಿಜ್ಞಾಪಿಸುವೆನು ವೈಕುಂಠನಾಯಕನೇ ||೧೦೩||

ಈ ಪರಿಸ್ಥಿತಿ ಕಲಿಯುಗದ ಪರಿ—
ತಾಪದಾಯಕ ನೋಡಲಾರೆನು
ಶ್ರೀಪತಿಯೆ ಬೇಡುವೆನು ವರವನ್ನೊಂದು ಕೊಡುಬೇಗ
ಈ ಪತಿತಜನ ಪಾವನೋತ್ಸುಕ
ದೀಪ ಬೆಳಗಲಿ ನಿನ್ನ ಸ್ತೋತ್ರ ಪ—
ರೋಪಕಾರಿಯಿದಾಗಿ ಯುಳಿಯಲಿ ಸತತ ಜನರೊಳಗೆ|೧೦೪|

ಕಾಡದಿರಲಿ ಪ್ರಪಂಚ ಬಾಧೆಯು
ಮಾಡುವವನಿಗೆ ಗ್ರಂಥ ಪಠಣವ
ಬೇಡುವವನಿಗೆ ಶಿಗಲಿ ಧನವದು ವಿಜಯಕೀರ್ತಿಯುತಂ
ಕೇಡು ನಿರ್ಧನತನವು ಪೋಗಲಿ
ಕೂಡಿ ಬರಲಿ ಮನೋರಥವು ಗಡ
ಪಾಡುವವನು ಸಮೃದ್ಧನಾಗಲಿ ನಿನ್ನ ದಯದಿಂದೆ ||೧೦೫||

ಭಗ್ನವಾದ ಮನೋರಥವು ನಿ-
ರ್ವಿಘ್ನವಾಗಿಯೆ ಸಿದ್ಧವಾಗಲಿ
ಲಗ್ನವಾಗಲಿ ಮಡದಿ ಸುಖ ಮನ ಸೋತ ಕಾಮುಕನ
ಮಗ್ನ ವಿಷಯಾಧೀನ ಮನವು
ದ್ವಿಗ್ನ ವಾಗದೆ ವಿರತಿಯಲಿ ಶ-
ತ್ರುಘ್ನ ನಗ್ರಜ! ನಿನ್ನ ಮರೆಯದೆ ಕಾಲಕಂಠಿಸಲಿ ||೧೦೬||

ಅಕ್ಕರದಿ ನಲಿದಾಡಿದರು ಮನೆ
ಮಕ್ಕಳಿಲ್ಲದೆ ಸುಖಿಸಲಾಗದು
ನಕ್ಕು ನಗಿಸುವ ಮೊಗವು ಮಗುವಿನ ನೋಡಬಯಸುವವ
ತಕ್ಕ ಪುತ್ರಾರ್ಥಿಗೆ ದೊರೆದು ಘನ
ಚೊಕ್ಕ ಪಂಡಿತ ಭಾಗ್ಯವಂತನು
ಮಿಕ್ಕಿ ಬಾಳಲಿ ನೂರು ವರುಷದ ಮೇಲೆ ದೃಢತನುವು ||೧೦೭||

ವಿಜಯಿಯಾಗಲಿ ದೀಪಕನು ಕುಲ
ಸುಜನ ನೆಂದನವರತ ಕೀರ್ತಿಯು
ನಿಜಪಿತೃ ಸೇವೆಯೊಳು ರತಿಯತ್ಯಂತ ಪಿಡಿದಿರಲಿ
ತ್ಯಜಿಸಿ ದಂಭವುದಾರ ನಾಗಲಿ
ದ್ವಿಜವರರು ಸರ್ವಜ್ಞನೆನ್ನಲಿ
ಭಜನೆ ನಿನ್ನದು ನಿತ್ಯ ಮಾಡುವ ತನುಜನನ್ನೀಯೈ ||೧೦೮||

ಇಷ್ಟ ಸಾಧ್ಯವದಾಗ ಲೆಲ್ಲವು
ಸೃಷ್ಟಿಯೊಳಗಿನ ಭಜಕಜನ ವ್ಯಾ-
ಧಿಷ್ಟನಾ ವ್ಯಾಧಿಯನೆ ಕಳೆದು ಪಶಮನದಾರೋಗ್ಯಂ
ಕುಷ್ಠ ಮೇಣ್ ಕ್ಷಯರೋಗವೆಲ್ಲವು
ಸ್ಪಷ್ಟವಾಗಿಯೆ ನಾಶಿಯಾಗಲಿ
ನಷ್ಟಕರ ಬೇನೆಗಳಪಸ್ಮಾರಾದಿಗಳು ತೊಲಗಿ ||೧೦೯||

ಭೋಗ ದುರ್ಧರ ದೂರವಾಗಲಿ
ರೋಗಗಳ ಬಾಧೆಗಳು ನಿಲ್ಲಲಿ
ಯೋಗದಭ್ಯಾಸವದು ಸಾಗಲಿ ಗ್ರಂಥ ಪಠಣ ಫಲಂ
ಆಗಿ ಬಡವನು ಭಾಗ್ಯವಂತನು
ರಾಗದಿಂದ ಸಮಸ್ತ ಸಭೆಯದು
ಬೇಗ ವಶವಾಗಲಿ ಪಠಿಸಲೀ ಗ್ರಂಥ ಭಕ್ತಿಯಲಿ ||೧೧೦||

ಶತ್ರುಗಳ ನಿಃಪಾತವಾಗಲಿ
ಪುತ್ರ ಪೌತ್ರ ಸಮೃದ್ಧಿಯಾಗಲಿ
ಮಿತ್ರರಾಪ್ತೇಷ್ಟರುಗಳದು ಸಹ ಪೀಡೆ ತಗುಲದಲಿ
ಕತ್ತಿಯೊಳು ಪೇಚಿನೊಳು ಶಿಗದೆ ಸು—
ಸೂತ್ರ ಪಾರಾಗಲಿ ಪ್ರಪಂಚದಿ
ಧಾತ್ರಿಯೊಳಗೀ ಸ್ತೋತ್ರ ಮಹಿಮೆಯು ಶ್ರದ್ಧೆಗಾಸ್ಪ
ದವೈ ||೧೧೧||

ಸಾರ್ಥಕವದಾಗಲಿ ಪ್ರಚುರ ವಿ—
ದ್ಯಾರ್ಥಿಗೆಲ್ಲವು ವಿದ್ಯೆದೊರೆಯಲಿ
ಕೀರ್ತಿಬೆಳಗಲಿ ಸಾಧು ಸಾಧೂವೆಂದು ಜಗದೊಳಗೆ
ಧೂರ್ತ ಮೋಸ್ಡ್ ಕಪಟಿಗಳ ಕೃತಕದ
ವಾರ್ತೆ ಪೀಡೆಯು ಯುದ್ಧದಲಿ ಸಹ
ಮೂರ್ತ ಶಸ್ತ್ರಾಸ್ತ್ರಗಳ ಭಾಧೆಯು ತಾಗದಂತಿರಲಿ ||೧೧೨||

ಅಂತಕಾಲದಿ ಪ್ರಕಟನಾಗುತೆ
ಸಂತವಿಸು ನಿಜ ಭಕ್ತ ಮನವನೆ
ಗ್ರಂಥದೊಳು ನಿಜ ನಿಷ್ಠೆಯುಳ್ಳ ಮುಮುಕ್ಷು ಭಜಕನಿಗೆ
ಇಂತು ಪ್ರಾರ್ಥಿಸಿದಾಗ ಧೋಕ್ಷಜ
ಕಂತು ಪಿತ ವೇಂಕಟರಮಣ ಹರಿ
ನಿಂತು ಮತ್ತೆ ಪ್ರಸನ್ನಚಿತ್ತನು ವರವನೀಡಿದನೈ ||೧೧೩||

ನುಡಿದನಾಗಳೆ ವಚನ ನಿಶ್ಚಯ
ಪಿಡಿಯುವದು ಹಗಲಿರಳು ಭಾವದಿ
ದುಡಿದು ವಿಶ್ವಾಸದಿ ಪಠಣವನೆ ಮಾಡಲೊಮ್ಮನದಿಂ
ನಡಿಸಿಕೊಡುವೆನು ಮಾಡಿದಿಚ್ಛೆಯ
ತಡೆಯುದಲೆ ಕ್ಷಣಮಾತ್ರ ಮರೆಯದೆ
ಕಡೆತನಕ ಋಣಭಾಗಿ ಯಾಗಿರುವವನ ಸಂನಿಧಿಯ ||೧೧೪||

ಏಕಮಂಡಲ ಪಠಣಮಾತ್ರದಿ
ಲೋಕದೊಳಗಿನ ಸಕಲ ಕಾಮನೆ
ಪ್ರಾಕ್ತನದಿ ದುರ್ಲಭವದಾದರು ಸಾಧ್ಯವಾಗುವದೈ
ಏಕವಿಂಶತಿ ದಿನ ಪಠಣ ಫಲ
ಪಾಕುಧನ ಶಿಗುವದು ಧನಾರ್ಥಿಗೆ
ಶೋಕ ಪೀಡೆ ಕ್ಷಯಾದಿ ರೋಗಗಳೆಲ್ಲ ಪೋಗುವವೈ ||೧೧೫||

ಆರು ತಿಂಗಳ ಪಠಣದಲಿ ಸುಕು-
ಮಾರ ಕನ್ಯೆಯು ಲಭಿಪಳಾತಗೆ
ಮೂರು ತಿಂಗಳ ಪಠಣದಲಿ ಪುತ್ರಾರ್ಥಿ ಕಾರ್ಯವದುಂ
ನೇರವಾಗಿಯೆ ಸಿದ್ಧಿಸುವ ವಿ-
ಸ್ತಾರ ಸ್ವಮುಖದಿ ತಿಳಿಸಿ ಜಗದಾ-
ಧಾರ ಶ್ರೀಹರಿ ವಚನ ನಿಜಭಕ್ತನಿಗೆ ಕೊಟ್ಟಿರಲೂ ||೧೧೬||

ಅನುಭವದಿ ತಿಳುಕೊಂಡು ತನ್ನಯ
ಮನವ ಶ್ರೀಹರಿ ಭಜನ ಕೆಳಿಸುವ
ಗುಣವು ಸಲೆಭವರೋಗ ಭೇಷಜವಾಗಿಹುದು ಹಿತದಿಂ
ನೆನೆದು ಭಗವದ್ಗುಣದ ಸಂಕೀ-
ರ್ತನವೆ ಕಲಿಕಾಲದಿ ಮೊರೆಯುವದು
ತನಗೆ ಲಾಭವದಾದ ಬಳಿಕನುಮಾನ ತೊಲಗುವದೈ ||೧೧೭||

ಈ ಧರಣಿತಲ ದೊಳಗೆ ಕಥೆ ಪ್ರ-
ಲ್ಹಾದನೊಬ್ಬನ ನಾಮನಿಷ್ಠೆಯ
ನಾದರದಿ ಕೊಂಡಾಡಿ ಹರಿಸಿಹರೆಲ್ಲ ಭಾವಿಕರು
ಶ್ರೀಧರನು ನಿಜಭಕ್ತ ಸಂಕಟ
ಬಾಧೆಯನೆ ಪರಿಹರಿಸಲೋಸುಗ
ಹಾದು ಕಂಬದೊಳಿಂದ ಬಂದನು ಭಕ್ತವತ್ಸಲನು ||೧೧೮||

ಆನೆ ಮೊಸಳೆಯ ಬಾಯೊಳಗೆ ಮುಂ
ಗಾಣದಲೆ ಪೇಚಾಡಿ ಬಳಲುತೆ
ನೀನೆ ಬಿಡಿಸುವನೊಬ್ಬ ಧೊರೆಯೆಂದೆನುತ ಮೊರೆಯಿಡಲು
ದೀನ ನಾಕಾಂತವನೆ ಕೇಳುತ
ಶ್ರೀ ನಿಕೇತನ ಪೋದ ಧಾವಿಸಿ
ಸಾನುರಾಗದೊಳಲ್ಲಿ ಭಕ್ತೋದ್ಧಾರ ಮಾಡಿದನೈ ||೧೧೯||

ಅರ್ಧದಲಿ ಬಿಡಲಾರ ನೆಂದಿಗು
ದುರ್ದಶೆಗೆ ಶಿಲುಕಿರುವ ಭಕುತನ
ದುರ್ಧರಾಪತ್ತನ್ನೆ ಕಳೆಯುವ ನೋಡಿ ಬರುತಲ್ಲೇ
ಇದರ್ು ಗೋಕುಲದೊಳಗೆ ರಕ್ಕಸ
ಮರ್ದನವ ಮಾಡಿಹನು ಹರಿ ಗೋ—
ವರ್ಧನೋದ್ಧರ ನೆನಿಸಿ ವ್ರಜಜನರನ್ನು ತಣಿಸಿಹನೈ ||೧೨೦||

ಇಂದಿಗಾದರು ಕಾಲಕಾಲಕೆ
ತಂದೆ ತಾಯ್ಗಳ ತೆರದಿ ಸ್ನೇಹದ
ಹೊಂದಿಕೆಯ ಪಿಡಿದಿಹನು ನಿಜಜನರಲ್ಲಿ ಸಂತತದಿ
ಮುಂದಿರುವ ಕರುವಿನೊಳು ಧೇನುವಿ—
ನಂದದಲಿ ವಾತ್ಸಲ್ಯಯುತ ಸ್ವಾ—
ನಂದಕಂದನನಾಥ ನಾಥನು ಕೃಪೆಯ ಸಲಿಸುವನೈ ||೧೨೧||

ಅನ್ಯ ಮಾತುಗಳೇಕೆ ಶ್ರೀ ಚೈ—
ತನ್ಯಘನ ವೈಕುಂಠನಾಯಕ
ಧನ್ಯ ಜಗತೀತಲವ ಮಾಡಲು ಧರೆಗೆ ಬಂದಿಹನೈ
ಪುಣ್ಯಾಕರ ಶೇಷಾದ್ರಿಯೊಳಗೆ ಹಿ—
ರಣ್ಯಗರ್ಭನ ವಾಸ ವಿಹುದು ಜ—
ಘನ್ಯ ವಿಷಯ ಪಿಪಾಸೆ ತ್ಯಜಿಸುತ ಯಾತ್ರೆ ಮಾಡು
ವದೈ ||೧೨೨||

ಸ್ವಾಮಿ ಪುಷ್ಕರಣಿಯ ತಡಾಗದಿ
ನೇಮ ನಿಷ್ಠೆಯ ನಡಿಸಿ ಶ್ರೀಹರಿ
ನಾಮಘೋಷದಿ ಸ್ತೋತ್ರಪಠಣವ ನಿತ್ಯಸಾಗಿಸಲು
ಕ್ಷೇಮಕರ ನಿಜಮೋಕ್ಷಮಂದಿರ
ಧಾಮದೊಳು ಸುಖಬಡುವದೆಲ್ಲವ
ಪಾಮರನು ಪರಮಾತ್ಮಕೃಪೆಯೊಳಸಾಧ್ಯವಂ ಪಡೆವಂ ||೧೨೩||

ಭಾವಯುತ ಮಾನವನ ಹಿತ ಪ—
ದ್ಮಾವತೀ ಪತಿ ವರದರಾಜನು
ಶ್ರೀವಿವೇಕ ವಿಚಾರ ಸ್ಮೃತಿಗಳನೆ ನೀಡುವನ್ನೈ
ಈ ವಿಷಯುದೊಳು ಶಂಕೆ ಪಿಡಿಯುದೆ
ದೇವ ಬ್ರಹ್ಮಾದಿಕರು ಸುರಮುನಿ
ಸೇವಿಪರು ಯೋಗಿಗಳು ತ್ರೈಲೋಕ್ಯವಮು ಭಜಿಸು
ವದ್ಕೈ ||೧೨೪||

ಮೋಸವಲ್ಲಿದು ತಿಳಿಯುವದು ಕೈ
ಲಾಸ ನಾಥನು ನಾಮಪರ ಸಂ—
ದೇಶವನೆ ಕೊಡುತಿಹನು ಕಾಶೀವಾಸ ಮಾಡುತಲಿ
ಕೇಶವನ ಸ್ಮರಣೆಯಲಿ ಸುಖವು ವಿ—
ಶೇಷ ಪೂರ್ಣಾನಂದ ಪ್ರೇಮದ
ವಿಾಸಲಾಗಿರುತಿಹುದನುಷ್ಠಾನದಲಿ ಪಡೆಯುವದ್ಕೈ ||೧೨೫||

ಪದ್ಯ ಪಾಠಾನುಭವ ಮನನ ಸು—
ವಿದ್ಯನಾಗುತ ದೇಹಭಾವನೆ
ಸದ್ಯದಲಿ ತೋರೆದೇಕ ಚಿತ್ತವದಾಗಲನುಭವಕೆ
ಮಧ್ಯರಾತ್ರಿಯ ಸಮಯದೊಳು ಸಲೆ
ವಿದ್ಯಮಾನ ಚತುರ್ಭುಜನು ಹರಿ
ಹೃದ್ಯ ಚೈತನ್ಯಘನ ತಾನೆಯೆ ಮುಂದೆ ನಿಲ್ಲುವನ್ನೈ ||೧೨೬||

ಪ್ರಸ್ತು ದಿ ತಾನಷ್ಟ ಭಾವದಿ
ವಾಸ್ತಕವನವನೆದುರು ಮಣಿಸುತೆ
ಹಸ್ತ ಕಮಲಗಳನ್ನು ಮುಗಿದು ವರಪ್ರಸಾದವನೆ
ಸ್ವಸ್ಥ ಚಿತ್ತದಿ ಮನದ ಬಯಕೆ ಪ್ರ
ಶಸ್ತವಾಗಿಯೆ ಬೇಡಿಕೊಂಬುದು
ವಸ್ತು ಭಗವಧ್ಯಾನದಲ್ಲಿ ನಿಮಗ್ನನಾಗುವದ್ಕೆ ||೧೨೭||

ಸರ್ವತಂತ್ರ ಸ್ವತಂತ್ರ ಶ್ರೀಹರಿ
ಯುರ್ವಿಯೊಳು ವ್ಯವಹಾರ ಮಾಳ್ಪನು
ನಿರ್ವಹಣೆಯಾತನದೆಯೆಂದ ಬಳಿಕ್ಕ ಮನುಜಕೃತಿ
ಉರ್ವರಿತ ಭಾವದಿ ಸಮರ್ಪಿಸಿ
ಗರ್ವರಹಿತರು ಕೋವಿದರು ಗಂ—
ಧರ್ವ ಕಿನ್ನರಯಕ್ಷ ಸುರಮುನಿ ದಾಸ್ಯಭಾವನೆಯು ||೧೨೮||

ಪಿಡಿದು ನಡೆವರು ಭಾನುಪಾವಕ
ರುಡುಪತಿಯು ತೇಜವದು ಮೂಲದಿ
ಕಡಲಶಯನನದೆಂದ ಬಳಿಕ ಮನುಷ್ಯಮತಿಗತಿಯು
ಬಿಡದೆ ಶ್ರೀಹರಿ ಪ್ರೇರಣೆಯು ಪರಿ
ವಿಡಿಯನವಲಂಬಿಸುತೆ ನಡೆವುದು
ನುಡಿದಿರುವ ಶಬ್ದಗಳ ಪೇಳಿಯೆ ಬರೆಸಿಹನು ಹರಿಯೂ||೧೨೯||

ಸ್ವಾಮಿ ತಾನಾಗುತಲಿ ಮನ ಚಿಂ—
ತಾಮಣಿಯೆ ಶಬ್ದಗಳ ನುಡಿಸಿದ
ರಾಮನಾಮೆಯುಪಾಖ್ಯ ರಾಘವದಾಸಗೊಲಿಯುತಲಿ

ಈ ಮಹೀತಲದಲ್ಲಿ ಸ್ತೋತ್ರವು
ಕಾಮಧೇನುವದಾಗಿಹುದು ಹರಿ
ನಾಮಸುಧೆಯನೆ ಕರೆದು ಪೂರೈಸುವದು ಬಯಕೆ
ಗಳಂ ||೧೨೦||

ಶ್ರೀ ವೇಂಕಟೇಶ ಸ್ತೋತ್ರಂ ಸಂಪೂರ್ಣಂ

